

ತೊರೆದು ಜೀವಿಸಬಹುದೇ ಹರಿ ನಿನ್ನ ಚರಣವ
ಬರಿದೆ ಮಾತೇಕಿನ್ನು ಅರಿತು ಪೇಳುವೆನಯ್ಯ ||ಪ||

ಕರ ಪಿಡಿದೆನ್ನನು ಕಾಯೋ ಕರುಣಾನಿಧೇ ||ಅ.ಪ.||

ತಾಯಿ ತಂದೆಯ ಬಿಟ್ಟು ತಪವ ಮಾಡಲುಬಹುದು
ದಾಯಾದಿ ಬಂಧುಗಳ ಬಿಡಲು ಬಹುದು
ರಾಯ ಮುನಿದರೆ ರಾಜ್ಯವ ಬಿಡಬಹುದು
ಕಾಯಜಪಿತ ನಿನ್ನಡಿಯ ಬಿಡಲಾಗದು ||೧||

ಒಡಲು ಹಸಿದರೆ ಅನ್ನವ ಬಿಡಬಹುದು
ಪಡೆದ ಕ್ಷೇತ್ರವ ಬಿಟ್ಟು ಹೊರಡಲು ಬಹುದು
ಮಡದಿ ಮಕ್ಕಳ ಕಡೆಗೆ ತೊಲಗಿಸಿ ಬಿಡಬಹುದು
ಕಡಲೊಡೆಯ ನಿಮ್ಮಡಿಯ ಘಳಿಗೆ ಬಿಡಲಾಗದು ||೨||

ಪ್ರಾಣವ ಪರರಿಗೆ ಬೇಡಿದರೆ ಕೊಡಬಹುದು
ಮಾನಾಭಿಮಾನ ತಗ್ಗಿಸಬಹುದು
ಪ್ರಾಣದಾಯಕನಾದ ಆದಿಕೇಶವರಾಯ
ಜಾಣ ಶ್ರೀಕೃಷ್ಣ ನಿನ್ನಡಿಯ ಬಿಡಲಾಗದು ||೩||

---ಶ್ರೀ ಕನಕದಾಸರು.

ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ :--

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ. 3 ಲಕ್ಷ, ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುಲವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ, (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು ಒಂದು ಬಾರಿಗೆ 10 ಶತಾಂಶ ದಂತೆ; ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ದೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇ., ತಿರುಪತಿ.




ಗೌರವ ಸಂಪಾದಕರು :

ಶ್ರೀ ಡಿ. ವಿ. ಎಲ್. ಎನ್. ಮೂರ್ತಿ, ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ :

ಕೆ. ಸುಬ್ಬಾರಾವು ಎಂ. ಎ.

ಉಪಸಂಪಾದಕ :

ಬಿ. ಎಸ್. ಶ್ರೀನಿವಾಸನ್ ಎಂ. ಎ.,

ಮುದ್ರಣ :

ಎಂ. ವಿಜಯಕುಮಾರ್ ರೆಡ್ಡಿ

ಲೇಖನ ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**





**ಸಂಪುಟ - ೨೪ ]　　ಡಿಸೆಂಬರ್ ೧೯೯೩　　[ ಸಂಚಿಕೆ - ೭**


# ವಿಷಯಸೂಚಿ



ಮುಖ ಪುಟ : ಆಂಡಾಳ್.

ಹಿಂಬದಿಯಲ್ಲಿ : ಕಪಿಲತೀರ್ಥ.

ಒಳಗಡೆ : 1. ಸುಬ್ರಹ್ಮಣ್ಯಸ್ವಾಮಿ.

2. ದತ್ತಾತ್ರೇಯಸ್ವಾಮಿ.




ಮಾನವ ಸೇವೆ ಮಾಧವಸೇವೆ ಎಂದರು. ಜನಸೇವೆಯೇ ಜನಾರ್ದನ ಸೇವೆ ಎಂದೂ ಹೇಳಿದರು. ಮನುಷ್ಯ ತನ್ನ ಬದುಕು ತಾನು ನೋಡಿಕೊಳ್ಳುತ್ತ, ತನ್ನ ಲೌಕಿಕ ಅಗತ್ಯ ಅಪೇಕ್ಷೆಗಳನ್ನು ಪೂರೈಸಿಕೊಳ್ಳುವಾಗ ತೀರ ಸ್ವಾರ್ಥ ಸಂಕೋಚದಲ್ಲಿ ಸಿಕ್ಕಿಕೊಳ್ಳದೆ ಸುತ್ತಲಿನ ಸಮಾಜವನ್ನೂ ಗಮನಿಸಿ ಅವರ ಅಗತ್ಯಗಳತ್ತಲೂ ತುಸು ಪ್ರಯತ್ನ ಪಡುವುದು ಮನುಷ್ಯನ ಅಂತರಂಗದ ಅಭಿವೃದ್ಧಿಗೆ ದೋಹದಕಾರಿ ಎಂಬ ಮಾನವತಾ ದೃಕ್ಪಥದಿಂದ ಉಂಟಾದ ಮಾತು.... ಮಾಧವಸೇವೆ ಎಂಬುದು. ಇದು ಸಾಮಾನ್ಯ ಜೀವನಕ್ಕೆ ಆದ ಮಾತು. ಭಾಗವತ, ಭಕ್ತ, ಭಗವಂತ ಇವರ ನೆಲೆ ಇದಕ್ಕಿಂತ ಹಿರಿದು.

ಭಕ್ತ ಜನ ಮುಂದೆ ನೀನವರ ಹಿಂದೆ -- ಎಂದರು ವಿಜಯದಾಸರು. ಭಗವಂತ ಬೀದಿ ಮೆರವಣಿಗೆಯಲ್ಲಿ ಬರುವಾಗ ಭಕ್ತರು ಉಘೇ ಉಘೇ ಎಂದು ಎಚ್ಚರ ಕೂಗುತ್ತ ಭಗವಂತನಿಗೆ ದಾರಿ ತೋರಿಸುವುದುಂಟು. ಪಾರ್ಷದರಿದ್ದಲ್ಲಿ ಪರಮಾತ್ಮ, ರಾಮಾಯಣದ ಹಾಡು ಕೇಳಿ ಬರುವಾಗ ಮಾರುತಿಯಿರುವಂತೆ, ಭಕ್ತರು ಭಗವಂತನ ಕೀರ್ತನೆಯಾಗುವಲ್ಲಿ ಸೇರುತ್ತಾರೆ. ಅವರಿಗೆ ಸೇವೆ ಮಾಡುವುದೂ -- ಭಾಗವತ ಸೇವೆ -- ಭಗವಂತನ ಸೇವೆಗಿಂತ ಹಿರಿದು ಎಂದರು. ಭಾಗವತಾಪಚಾರ ಭಗವದಪಚಾರಕ್ಕಿಂತ ದೊಡ್ಡದು ಎನ್ನಲು ನೂರಾರು ಉದಾಹರಣೆಗಳೂ ಉಂಟು. ಶರಣಸೇವೆ ಶಿವಸೇವೆಗಿಂತ ಹಿರಿದು ಎಂದೇ ಸನಾತನ ಧರ್ಮದ ಪರಂಪರೆ.

ಇಂತಲ್ಲಿ ತಿರುಪತಿ ಎಂಬ ಒಂದು ಕ್ಷೇತ್ರವಿದೆ. ಶ್ರೀವೆಂಕಟೇಶ್ವರಸ್ವಾಮಿ ವೈಕುಂಠವನ್ನು ಬಿಟ್ಟು ಭಕ್ತರ ಮಧ್ಯದಲ್ಲಿರಲು ಆರಿಸಿಕೊಂಡು ಬಂದು ನೆಲೆಸಿದ ಸ್ಥಳ. ಭಕ್ತರು ಬರುವರೆಂದು ತಾನು ಅಲ್ಲಿರಲು "ಅವನೇ" ಇಳಿದು ಬಂದನೋ, "ಅವನು" ಇದ್ದಾನೆಂದು ಭಕ್ತರು ಬರುತ್ತಾರೆಯೋ ಎಂಬುದಲ್ಲ ಪ್ರಶ್ನೆ, "ಅವನಿ"ಗಾಗಿ ಭಕ್ತರು ಬರುತ್ತಾರೆ ಎಂಬುದು ಮೂಲ ಸೂತ್ರ. 'ನಿನ್ನ ಭಕ್ತರ ನೋಡಲು ಬಂದೆನಲ್ಲದೆ ನಿನ್ನ ನೋಡಲು ಬಂದೆನೇ' ಎಂದರು ದಾಸರು. ದೇರೆಲ್ಲಿ ಸಾಧ್ಯ ಈ ಭಕ್ತ ಜನಸಂದೋಹ ಎಂಬುದು ದಾಸರ ಇಂಗಿತ.

ಈ ಒಂದು ಅಪಾರ ಭಕ್ತ ಜನ ಸನ್ನಿಧಿಯಲ್ಲಿ ಸೇವೆ ಸಲ್ಲಿಸುವ ಸೌಭಾಗ್ಯ ತಿ. ತಿ. ದೇವಸ್ಥಾನಗಳ ಉದ್ಯೋಗಿಗಳದು. ಬಾಗವತ ಸೇವೆಯ ಅವಕಾಶ ದೊರಕಿರುವುದೇ ಒಂದು ಇಹಪರಸಾಧಕವೆಂಬುದನ್ನು ತಿಳಿಯದೇಕು. ಉದ್ಯೋಗರೀತ್ಯ ಉದರಂಭರಣವಾದರ ಅದನ್ನು ಸಮರ್ಪಕವಾಗಿ, ಸರಿಯಾಗಿ, ಸೂಕ್ತವಾಗಿ, ಸೌಜನ್ಯದಿಂದ, ಸೌಶೀಲ್ಯದಿಂದ ನಿರ್ವಹಿಸುವುದರಿಂದ ಭಾಗವತ ಸೇವೆಯೂ ಆಗಿ, ಐಹಿಕಾಮುಷ್ಮಿಕ -- ಲೌಕಿಕಾಲೌಕಿಕ ಸಾಧನವಾಗುತ್ತದೆ -- ಎಂಬುದನ್ನು ತಿಳಿದು ನಡೆಯದೇಕು. ಹಾಗೆ ನಡೆಯುವುದರಿಂದಲೇ ಒಡೆಯನಿಗೂ ಉದ್ಯೋಗಿಗೂ ಕೀರ್ತಿ.

ಈ ಒಂದು ಒಳವಿವರವನ್ನು ತಿ.ತಿ.ದೇ. ಗಳ ಉದ್ಯೋಗಿಗಳಲ್ಲಿ ಪರಡಲು ದೇವಸ್ಥಾನಗಳ ಯಾಜಮಾನ್ಯ ಹಾಗೂ ಉದ್ಯೋಗಿಗಳ ಸಂಘಟನೆಗಳು "ಭಕ್ತ ಯಾತ್ರಿಕ -- ಉದ್ಯೋಗಿ ಸಂಬಂಧಗಳು" ವಿಷಯದಲ್ಲಿ ಮೂರುದಿನಗಳ ಸಮಾವೇಶ ನಡೆಸಿದೆ. ಅಲ್ಲಿನ ತೀರ್ಮಾನಗಳು ವಿಚಾರ ಮಂಥನದಲ್ಲಿ ಉದ್ಭವಿಸಿದ ಜ್ಞಾನ ನವನೀತ -- ತಿ. ತಿ. ದೇವಸ್ಥಾನಗಳ ಉದ್ಯೋಗಿಗಳಿಗೆ ಮಾರ್ಗದರ್ಶಕ ಸೂತ್ರಗಳು ಮಾತ್ರವೇ ಆಗದೆ ಸಂವಿಧಾನದ ಮೂಲ ಸೂತ್ರಗಳೂ ಆಗಬೇಕು. ಹಾಗೆಯೇ ಅವು ಇಂತಹದೇ ಇತರ ಕ್ಷೇತ್ರಗಳಲ್ಲಿ ಕೆಲಸ ನಿರ್ವಹಿಸುವವರಿಗೂ ಆದರ್ಶವಾಗ ದೇಕು ಎಂದು ಹಾರೈಸುತ್ತ, ಸೇವೆ ಪಡೆಯುವ ಅವನ ಕೃಪೆಯನ್ನು ಪ್ರಾರ್ಥಿಸೋಣ. ನಿನ್ನ ದಾಸನ ದಾಸನ ದಾಸ ನಾನು ಎಂದ ಕನಕದಾಸರು, ಕುಲಶೇಖರರು ಆದರ್ಶವಾಗಲಿ ಎಂದು ಹಾರೈಸೋಣ. ಹಾಗಾಗಲು ಪ್ರಯತ್ನಿಸೋಣ.

* * * * *

# ದೇವಾಲಯಗಳು

---ಎಚ್. ವಿ. ನರಸಿಂಹಮೂರ್ತಿ.



ಮಾನವನಿಗೂ ಭಗವಂತನಿಗೂ ಇರುವ ಬಾಂಧವ್ಯವು ನಿತ್ಯವಾದುದು; ಪ್ರತಿಯೊಬ್ಬನೂ ಭಗವಂತನೊಂದಿಗೆ ನೇರವಾಗಿ ತನ್ನ ಸಂಬಂಧವನ್ನು ಬೆಳಸಿಕೊಂಡು ಸಾಕ್ಷಾತ್ಕಾರಕ್ಕಾಗಿ ಪ್ರಯತ್ನಿಸಬೇಕು -- ಎಂಬುದು ಸನಾತನ ಹಿಂದೂ ಧರ್ಮದ ನಿಖರ ನಿಲುವು. ಆದ್ದರಿಂದ ದೇವಾಲಯವನ್ನು ಕಟ್ಟುವುದರ ಬಗ್ಗೆ ಅಥವಾ ದೇವಾಲಯಗಳಿಗೆ ಇಂಥಿಂಥ ದಿನ ಹೋಗಲೇಬೇಕೆಂಬ ಬಗ್ಗೆ ಅವನಿಗಾವ ನಿರ್ಬಂಧವೂ ಇಲ್ಲ. ಅವನಿಗೆ ತನ್ನ ದೇಹವೇ ದೇಗುಲ; ಅದರಲ್ಲಿರುವ ಪ್ರತ್ಯಗಾತ್ಮನೇ ಪರಮೇಶ್ವರ. ಅದನ್ನೇ ಬಲ್ಲವರು 'ದೇಹೋ ದೇವಾಲಯಃ ಪ್ರೋಕ್ತಃ ಜೀವೋಽಹಂ ಸಃ ಸದಾಶಿವಃ' ಎಂದಿದ್ದಾರೆ.

ಆದರೆ ಈ ಅತ್ಯುಚ್ಚ ಭಾವನೆಯನ್ನು ಅರ್ಥ ಮಾಡಿಕೊಂಡು ಅರಗಿಸಿಕೊಳ್ಳುವ ಶಕ್ತಿ ನಮ್ಮಂಥ ಸಾಮಾನ್ಯ ಜನರಿಗಿಲ್ಲ. ನಮಗಾದರೋ ಕಣ್ಣಿಗೆ ಕಾಣುವಂತೆ, ಕಿವಿಗೆ ಕೇಳುವಂತೆ, ಕೈಗೆ ಎಟುಕುವಂತೆ ಸ್ಥೂಲರೀತಿಯಲ್ಲಿ ಕೊಟ್ಟ ಹೊರತು ಸೂಕ್ಷ್ಮತತ್ವಗಳಾವುವೂ ಬಹುಪಾಲು ಅರ್ಥವೇ ಆಗವು. ನಮ್ಮ ದೇವರಿಗೊಂದು ಆಕಾರವಿರಬೇಕು. ಈ ಮೂರ್ತಿಗೊಂದು ಗುಡಿ ಇರಬೇಕು. ಅವನಿಗೂ ನಮ್ಮಂತೆಯೇ ಅಲಂಕಾರ, ಊಟ--ಉಪಚಾರಗಳು ನಡೆಯಬೇಕು. ಆಗಲೇ ನಮಗೆ ಆನಂದ, ತೃಪ್ತಿ. ಆದ್ದರಿಂದಲೇ ಸನಾತನ ಹಿಂದೂ ಧರ್ಮವು ನಮ್ಮಂಥಹ ಜನ ಸಾಮಾನ್ಯರಿಗಾಗಿ ದೇವಾಲಯಗಳನ್ನು ಕೊಟ್ಟಿದೆ.

ವಾಸ್ತವವಾಗಿ ದೇವಾಲಯವು ಕೂಡ ನಮ್ಮ ದೇಹದ ಬಾಹ್ಯಪ್ರತೀಕ. ದೇವಾಲಯದ ವಿವಿಧ ಭಾಗಗಳಿಗಿತ್ತಿರುವ ಹೆಸರುಗಳು ಈ ದೇಹದ ಅಂಗಗಳ ಹೆಸರುಗಳೇ. ಮತ್ತೊಂದು ದೃಷ್ಟಿಯಿಂದ ದೇವಾಲಯವು ಇಡೀ ಸೃಷ್ಟಿಯನ್ನು ಪ್ರತಿನಿಧೀಕರಿಸುತ್ತದೆ. ಸೃಷ್ಟಿಕರ್ತನು ಅದರಲ್ಲಿ ಅಂತರ್ಯಾಮಿಯಾಗಿ ಹೊಕ್ಕು ಕುಳಿತಿರುತ್ತಾನೆ.

ಸಾಧಾರಣವಾಗಿ ದೇವಸ್ಥಾನಗಳ ಮಹಾದ್ವಾರವು ಹೆಸರಿಗೆ ತಕ್ಕಂತೆಯೇ ಬೃಹತ್ತಾಗಿಯೂ, ಭವ್ಯವಾಗಿಯೂ ಇರುತ್ತದೆ. ಅದರ ಮುಂದೆ ನಿಂತಾಗ ತ್ರಿಜಗದೊಡೆಯನ ಮುಂದೆ ನಾವೆಷ್ಟು ಕ್ಷುದ್ರರೂ, ಅಲ್ಪರೂ ಆಗಿದ್ದೇವೆಂಬುದರ ಅರಿವು ನಮಗಾಗುತ್ತದೆ. ಈ ಭವ್ಯಾಲಂಕೃತ ಮಹಾದ್ವಾರವನ್ನೂ, ಪ್ರಾಕಾರವನ್ನೂ ಹೊರಗೇಬಿಟ್ಟು ಒಳಕ್ಕೆ ಪ್ರವೇಶಿಸಿದಾಗ ನಾವು ಕಾಣುವುದೇನನ್ನು? ಚಿಕ್ಕದಾದ ಗರ್ಭಗುಡಿ! ಅದರೊಳಗೋ ಕತ್ತಲು. ಆರತಿ ಬೆಳಗಿದಾಗ ಮಾತ್ರ ಭಗವಂತನ ದರ್ಶನ. ಇದರರ್ಥವಿಷ್ಟೆ; ಭವ್ಯವಾದ ಬಾಹ್ಯಪ್ರಪಂಚವನ್ನು ಬಿಟ್ಟು ಮನಸ್ಸನ್ನು ಅಂತರ್ಮುಖವಾಗಿಸಬೇಕು. ಹೃದಯಗುಹೆಯಲ್ಲಿ ಜ್ಞಾನದೀಪವನ್ನು ಹಚ್ಚಬೇಕು ಆಗ ಮಾತ್ರ ನಮ್ಮ ಹೃದಯನಾಥನ ದರ್ಶನವಾದೀತು-- ಎಂದು.

ನಮ್ಮದು ದೇಗುಲಗಳ ನಾಡು. ನಮ್ಮಲ್ಲಿ ದೇವಾಲಯವಿಲ್ಲದ ಹಳ್ಳಿಯಿಲ್ಲ, ಊರಿಲ್ಲ. ಗಣಪತಿ -- ಸುಬ್ರಹ್ಮಣ್ಯ -- ಶಿವ -- ದೇವಿ -- ವಿಷ್ಣು -- ಮಾರುತಿ -- ಅಂತೂ ಯಾವುದಾದರೊಂದು ದೇವತೆ ಬೀಡು ಬಿಟ್ಟಿರಲೇಬೇಕು. ಅವು ನಮ್ಮ ಆಧ್ಯಾತ್ಮಪರಂಪರೆಯ ದ್ಯೋತಕಗಳು. ನಮ್ಮ ಸಾಮಾಜಿಕ ಜೀವನದಲ್ಲಿ ಅವು ಸಹಸ್ರಾರು ವರ್ಷಗಳಿಂದಲೂ ಪ್ರಮುಖ ಸ್ಥಾನವನ್ನು ವಹಿಸುತ್ತ ಬಂದಿವೆ. ನಮ್ಮ ಧರ್ಮವನ್ನು ಕಾಪಾಡುವುದರಲ್ಲಿ, ನಮ್ಮ ಸಂಸ್ಕೃತಿಯನ್ನು ರಕ್ಷಿಸುವುದರಲ್ಲಿ, ನಮ್ಮ ಕಲೆ--ಕಸುಬುಗಳಿಗೆ ಪ್ರೋತ್ಸಾಹ ಕೊಡುತ್ತ ಉಳಿಸಿಕೊಂಡು ಬರುವುದರಲ್ಲಿ ಅವುಗಳು ನಿರ್ವಹಿಸಿರುವ ಪಾತ್ರ ಅಷ್ಟಿಷ್ಟಲ್ಲ. ಅಷ್ಟೇ ಅಲ್ಲ, ಧರ್ಮವನ್ನು ಜನಪ್ರಿಯರೂಪದಲ್ಲಿ ಹರಡುವ ಜಾತ್ರೆ -- ರಥೋತ್ಸವ -- ಹಬ್ಬ -- ಹರಿದಿನಗಳಿಗೂ ಅವು ಕೇಂದ್ರಸ್ಥಾನ.

ವಿಧಿಪೂರ್ವಕವಾಗಿ ವಿಗ್ರಹ ಪ್ರತಿಷ್ಠೆಯಾಗಿರುವ ದೇವಾಲಯಗಳಲ್ಲಿ ಪರಮಾತ್ಮನ ಶಕ್ತಿ ಜಾಗೃತವಾಗಿರುವುದರಿಂದ ಅಲ್ಲಿ ಪೂಜೆ ನಡೆಯಬೇಕು. ಈ ಪೂಜೆಯು ದಿನಕ್ಕೆ ಒಂದರಿಂದ ಒಂಭತ್ತು ಸಲ ನಡೆಯಬಹುದು. ವಿಶೇಷಸಂದರ್ಭಗಳಲ್ಲಿ ಉತ್ಸವಗಳನ್ನು ಆಚರಿಸುವುದು ವಾಡಿಕೆ. ಇಂಥ ಉತ್ಸವಗಳಲ್ಲಿ ಅತ್ಯಂತ ದೊಡ್ಡ ಉತ್ಸವವನ್ನು ಬ್ರಹ್ಮೋತ್ಸವ ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿಯೇ ರಥೋತ್ಸವವನ್ನು ನೆರವೇರಿಸುತ್ತಾರೆ. ರಥವು ದೇವಾಲಯದ ಚಲಪ್ರತೀಕ.

ದೇವಾಲಯಕ್ಕೆ ದರ್ಶನಕ್ಕಾಗಿ ಬರುವವರು ಸ್ನಾನ ಮಾಡಿ, ಶುಚಿಯಾಗಿ ಬರಬೇಕು. ಮೌನದಿಂದ ನೇರವಾಗಿ ಒಳಕ್ಕೆ ಹೋಗಿ, ದೇವರ ದರ್ಶನ ಪಡೆದು, ಹೊರಗೆ ಬಂದು, ಪ್ರದಕ್ಷಿಣೆ ಮಾಡಿ, ಧ್ವಜ ಸ್ತಂಭದಿಂದಾಚೆಯಿಂದ ನಮಸ್ಕಾರ ಮಾಡಬೇಕು. ಪರಿವಾರ ದೇವತೆಗಳ ಗುಡಿಗಳನ್ನೂ ಸಂದರ್ಶಿಸಿ, ಈಶಾನ್ಯದ ಮಹಾದ್ವಾರದ ಬಳಿ ಕುಳಿತು ಧ್ಯಾನ ಮಾಡಬೇಕು. ಗದ್ದಲವಿಲ್ಲದೆ, ಗಾಂಭೀರ್ಯದಿಂದ ನಡೆದುಕೊಳ್ಳುವುದು, ದೇವಾಲಯದ ಶುಚಿತ್ವ ಕೆಡದಂತೆ ನೋಡಿಕೊಳ್ಳುವುದು ಭಕ್ತರ ಕರ್ತವ್ಯ. ✪

# ತಿ. ತಿ. ದೇವಸ್ಥಾನಗಳು, ತಿರುಪತಿ
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ :

ಶ್ರೀನಿವಾಸನ ಹಾಡುಗಳು--ಭಾಗ--೨ (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4--30
ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) --ವಿ. ಬಾದರಾಯಣ ಮೂರ್ತಿ 12--50
ಪುರಂದರೋಪನಿಷತ್ (ಪುರಂದರದಾಸರ ಏಳು ಕೃತಿ ವಿವರಣೆ) --ಬನ್ನಂಜೆ ಗೋವಿಂದಾಚಾರ್ಯ 7--00
ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) --ಸಂ. ಕೆ. ಅಪ್ಪಣ್ಣಾಚಾರ್ಯ 3--75
ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) --ಸಂ. ಕೆ. ಅಪ್ಪಣ್ಣಾಚಾರ್ಯ 2--25
ಸ್ತೋತ್ರ ಕುಸುಮಮಾಲಾ --ಸಂ. ವೆಂಕಟಾಚಲ 3--00
ಆಚಾರಗಳು ಆಡಂಬರಗಳು --ಕೆ. ಚಂದ್ರಮೌಳಿ 0--40
ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) ೨--50
" " (ಕನ್ನಡ ಲಿಪಿಯಲ್ಲಿ) 0--12

### ಮಕ್ಕಳಿಗಾಗಿ :

ಶ್ರೀಪಾದರಾಜರು --ಎಂ. ಎಸ್. ಗುಂಡೂರಾವ್ 0--75
ಮಹಿಪತಿದಾಸರು --ಶಾನಭಾಗ 0--85
ಪ್ರಸನ್ನ ವೆಂಕಟದಾಸರು --ವಿ. ಬಾದರಾಯಣಮೂರ್ತಿ 0--80
ಗೋಪಾಲದಾಸರು --ರುಕ್ಮಿಣಿಗಿರಿಮಾಜಿ 0--75

### ಹಿಂದಿ :

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ --ಡಾ. ಎಂ. ಸಂಗಮೇಶಂ 0--20
ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) 11--00
ತೀರ್ಥರಾಜ ತಿರುಪತಿ --ಡಾ. ಎಂ. ಸಂಗಮೇಶಂ 1--50

### ಸಂಸ್ಕೃತ :

ಶ್ರೀ ವೇಂಕಟೇಶ್ವರ ಸುಪ್ರಭಾತಂ 0--12
ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0--62
ಕಠೋಪನಿಷತ್ --ಡಾ. ಕೆ. ಸಿ. ವರದಾಚಾರಿ ಹಾಗೂ --ಡಾ. ಡಿ. ತಾತಾಚಾರ್ಯ 15--00
ಮಾರ್ಕಂಡೇಯ ಸಂಹಿತಾ 18--00
ತತ್ತ್ವಸಂಖ್ಯಾನಂ -- ಆರ್. ರಾಮಮೂರ್ತಿ ಶರ್ಮಾ 2--00
ಬ್ರಹ್ಮಸೂತ್ರ ಭಾಷ್ಯ (ಭಾಗ--೧) -- ಆರ್. ರಾಮಮೂರ್ತಿ ಶರ್ಮಾ 30--00
ಅಲಂಕಾರ ಸಂಗ್ರಹ -- ಸಂ--ಕೆ. ಭಾಸ್ಕರರಾವ್ 16--00
ಸೀತಾರಾಮಾಂಜನೇಯಂ --ಡಾ. ಡಿ. ಅರ್ಕಸೋಮಯಾಜಿ 50--00
ಪ್ರಶ್ನೋಪನಿಷತ್ 11--00
ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ --ಸಂ--ಡಾ. ಎಸ್. ಬಿ. ರಘುನಾಥಾಚಾರ್ಯ 25--00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30 ಶತಾಂಶ ರಿಯಾಯಿತಿಯೂ, 500 ರೂಗಳಿಂದ 1000ರೂ.ವರೆಗೆ 25 ಶತಾಂಶ ರಿಯಾಯಿತಿಯೂ, 100 ರೂ.ಗಳಿಂದ 500 ರೂ.ವರೆಗೆ 15 ಶತಾಂಶ ರಿಯಾಯಿತಿಯೂ ಉಂಟು.

ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ :

**ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,**

ತಿ. ತಿ. ದೇ. ತಿರುಪತಿ.

# ಕಂಚಿವರದ

---ಸಿ. ಗೋವಿಂದಾಚಾರ್.

ದಿವ್ಯದೇಶ ಚತುಷ್ಟಯದ ಪೈಕಿ ಪೆರುಮಾಳ್ ಕೋಯಿಲ್ (ತ್ಯಾಗಮಂಟಪ) ಎಂದು ಪ್ರಸಿದ್ಧಿಯಾದ ಕಂಚಿ ವರದರಾಜಸ್ವಾಮಿ ಮೂರನೆಯ ಸ್ಥಾನಗಳಿಸಿದೆ. ಸಪ್ತಮೋಕ್ಷದಾಯಕ ಹಾಗೂ ಪ್ರಾಚೀನ ವಿದ್ಯಾಕೇಂದ್ರಗಳ ಪೈಕಿ ಕಂಚಿಯೂ ಒಂದು. 'ನಗರೇಷು ಕಾಂಚೀ' ಎಂದು ಕವಿಗಳು ಕಂಚಿಯನ್ನು ಅತ್ಯಂತವಾಗಿ ಆರಾಧಿಸಿದ್ದರಿಂದ 'ಹಸ್ತಿಗಿರಿ' ಎಂದು ಹೆಸರಿದೆ. ಕಂಚಿ ಅಥವ ಕಚ್ಚಿ ಎಂಬ ಪದ 'ಕಚಿದೇಶ್ವರ' ಎಂಬ ಪದದಿಂದ ಬಂದಿರುತ್ತೆ ಎಂಬ ವಾದವೂ ಇದೆ. ಅತ್ತಿಗಿರಿ, ಅಟ್ಟಿಯೂರ್, ತಿರುವಟ್ಟಿಯೂರ್, ಅತ್ತಿಗಿರಿ ತಿರುಮಾಲ್, ಪೇರರುಳಾಳನ್, ದೇವಪ್ಪೆರುಮಾಳ್ ಎಂದು ತಮಿಳಿನಲ್ಲಿ, ಹಸ್ತಿಶೈಲ, ಹಸ್ತೀಶ, ಕರಿಗಿರೀಶ, ಕರಿಗಿರಿ ಪತಿ, ದೇವರಾಜ, ವರದರಾಜ ಎಂದು ಸಂಸ್ಕೃತದಿವ್ಯನಾಮಗಳಿವೆ.

ಬ್ರಹ್ಮಾಂಡ ಪುರಾಣದಲ್ಲಿ ನಾರದ ಭೃಗುಮಹರ್ಷಿಗಳ ಸಂವಾದದ ರೂಪದಲ್ಲಿ ಹಸ್ತಿಗಿರಿ ಮಹಾತ್ಮೆ ಉಕ್ತವಾಗಿದೆ. ಲೋಕ ಕಲ್ಯಾಣವೆಂಬ ಮಹದೋದ್ದೇಶದಿಂದ ಅಶ್ವಮೇಧ ಯಾಗ ಮಾಡಲು ಬ್ರಹ್ಮನಿಗೆ ಅಶರೀರವಾಣಿಯ ಮೂಲಕ ಭಗವದಾಜ್ಞೆ ಆಗಿತ್ತು. ದಂಪತಿ ಸಮೇತ ಯಜ್ಞ ಮಾಡಲು ಬ್ರಹ್ಮನು ಸರಸ್ವತಿಯನ್ನು ಸಿದ್ಧಳಾಗಲು ಹೇಳಿದ. ಬೇರಾವುದೋ ವಿಷಯದಲ್ಲಿ ಮುನಿಸಿಕೊಂಡಿದ್ದ ಸರಸ್ವತಿಯು ಬ್ರಹ್ಮ ಹೇಳಿದ್ದನ್ನು ನಿರಾಕರಿಸಿದಳು. ಮುಹೂರ್ತ ಮೀರುತ್ತಿರುವುದನ್ನು ಕಂಡ ಬ್ರಹ್ಮನು ಯಜ್ಞ ಆರಂಭಿಸಿದ. ಕುಪಿತಳಾದ ಸರಸ್ವತಿಯು ವೇಗವತಿ ನದಿಯಾಗಿ ಕಾಣಿಸಿಕೊಂಡು ರಭಸದಿಂದ ಯಜ್ಞಕುಂಡದತ್ತ ಮುನ್ನುಗ್ಗಿದಳು. ಬ್ರಹ್ಮ ಮತ್ತು ಋಷಿಗಳು ಏನೂ ತೋಚದೆ ವಿಷ್ಣುವನ್ನು ಪ್ರಾರ್ಥಿಸಿದರು. ಮೊದಲು ಆದಿಶೇಷನು ವೇಗವತಿಯನ್ನು ತಡೆಯಲು ಪ್ರಯತ್ನಿಸಿ ವಿಫಲನಾದ ನಂತರ ವಿಷ್ಣುವೇ ನದಿಗೆ ಅಡ್ಡಲಾಗಿ ಅಣೆಕಟ್ಟಿನಂತೆ ಮಲಗಿ ರಭಸದಿಂದ ಮುನ್ನುಗ್ಗುತ್ತಿರುವ ವೇಗವತಿಯನ್ನು ತಡೆದ. (ಯಥೋಕ್ತಕಾರಿ ದೇವಸ್ಥಾನದಲ್ಲಿ ಈ ಮೂರ್ತಿ ವೈಶಿಷ್ಟ್ಯವನ್ನು ನೋಡಬಹುದು.) ಬ್ರಹ್ಮನು ಯಜ್ಞವನ್ನು ಪೂರ್ಣಗೊಳಿಸಿದ. ಹಸ್ತ ನಕ್ಷತ್ರದಂದು ವಿಷ್ಣುವು ವರದರಾಜನಾಗಿ ಅಗ್ನಿಕುಂಡದಿಂದ ಆವಿರ್ಭವಿಸಿದ. ಸರಸ್ವತಿ ತನ್ನ ತಪ್ಪಿಗಾಗಿ ವಿಷ್ಣುವಿನಲ್ಲಿ ಕ್ಷಮೆ ಬೇಡಿದಳು. ದೇವತೆಗಳಿಂದ ಪುಷ್ಪವೃಷ್ಟಿ ಆಯಿತು. ಬ್ರಹ್ಮ ಸರಸ್ವತಿಯರು ಸತ್ಯಲೋಕಕ್ಕೆ ಹೊರಡುವ ಮುನ್ನ ವಿಷ್ಣುವನ್ನು ಕುರಿತು -- 'ಹೇ ಭಗವನ್ ನಮ್ಮೆಲ್ಲರ ಅಭೀಷ್ಟವನ್ನು ಈಡೇರಿಸಿದೆ. ಹೇಳಿದ್ದನ್ನು ಮಾಡಿದೆ. ಕೇಳಿದ್ದನ್ನು ಕೊಡುವ ವರದರಾಜನಾಗಿ ಇಲ್ಲೇ ನೆಲೆಸಿ ಜೀವಕೋಟಿಯನ್ನು ಉದ್ಧರಿಸು' ಎಂದು ಪ್ರಾರ್ಥಿಸಲು ವಿಷ್ಣುವು ಸಮ್ಮತಿಸಿ ಅರ್ಚಾಮೂರ್ತಿಯಾಗಿ ನೆಲೆಸಿದ. 'ಕ ಇತಿ ಬ್ರಹ್ಮಣೋ' ಎಂಬಂತೆ ಬ್ರಹ್ಮೇಂದ್ರ ರುದ್ರರಿಗೆ ಪ್ರಭುವಾದ ಆ ಕೇಶವನು ಬ್ರಹ್ಮನೊಂದಿಗೆ ಲೀಲೆ ಆಡಿದ್ದರಿಂದ (ಕ = ಬ್ರಹ್ಮ ಚಿ = ಹರಿ) ಕಂಚಿ ಎಂದು ಪ್ರಸಿದ್ಧಿ ಆಯಿತು. ಈ ಕ್ಷೇತ್ರವನ್ನು ಸತ್ಯವ್ರತಕ್ಷೇತ್ರ ಎಂದೂ ಕರೆಯುವರು.

ಆಕಾರ ಹಾಗೂ ವ್ಯಾಪ್ತಿಯಲ್ಲಿ ದೊಡ್ಡಕಂಚಿ ಚಿಕ್ಕ ಕಂಚಿ (ಕಚ್ಚಿಪೇಡು) ಎಂದು ಎರಡು ಭಾಗಗಳಿವೆ. ಹಸ್ತಿಗಿರಿ ಇರುವುದು ಚಿಕ್ಕ ಕಂಚಿಯಲ್ಲಿ, ಕಂಚಿ ಚರಿತ್ರೆ ಪಲ್ಲವರಕಾಲದಿಂದ ಗುರುತಿಸಬಹುದಾದರೂ, ಹಸ್ತಿಗಿರಿ ನಿರ್ಮಾಣದ ಬಗ್ಗೆ ಇವರ ಪಾತ್ರವಿರುವುದು ಅಸ್ಪಷ್ಟವಾಗಿದೆ. ೧೧ ನೇ ಶತಮಾನದ ಸುಮಾರಿಗೆ ಒಂದನೆ ಚೋಳರಾಜ ವರದರಾಜನಿಗೆ ಗರ್ಭಗುಡಿಯನ್ನೂ ಇದರಡಿಯಲ್ಲಿ ನೃಸಿಂಹ ಸನ್ನಿಧಿಯನ್ನೂ ಕಟ್ಟಿಸಿದನೆಂದು ಶಾಸನಗಳಿಂದ ತಿಳಿದುಬರುವುದು. ಇದಕ್ಕೆ ಮುಂಚೆ ಮಾಮಲ್ಲವರ್ಮನು ಮಹಾಬಲಿಪುರಂನಲ್ಲಿ ತಲಶಯನ ದೇವಸ್ಥಾನವನ್ನೂ ಮತ್ತು ಪರಮೇಶ್ವರ ವರ್ಮನು ವೈಕುಂಠಪೆರುಮಾಳ್ (ಪರಮೇಚ್ಚುರ ವಿಣ್ಣಹರಂ) ದೇವಸ್ಥಾನವನ್ನು ಕಟ್ಟಿಸಿದನೆಂದೂ ಹಾಗೂ ಇವರ ನಂತರ ಬಂದ ಪಲ್ಲವರಾಜನು ತಿರುಮಳಿಶೈ ಆಳ್ವಾರರ ಬಗ್ಗೆ ಅಪಚಾರ ಪಟ್ಟು ನಂತರ ಕ್ಷಮೆ ಬೇಡಿ ಯಥೋಕ್ತಕಾರಿ (ತಿರುವೇಕ್ಕಾ) ಕ್ಷೇತ್ರವನ್ನು ನಿರ್ಮಿಸಿದನೆಂದು ಇತಿಹಾಸ ಪುಟಗಳಿಂದ ತಿಳಿದುಬರುತ್ತದೆ.

ದೇವಸ್ಥಾನದ ಸರ್ವಾಂಗೀಣ ಅಭಿವೃದ್ಧಿಗೆ ವಿಜಯನಗರದ ಅರಸರು ಹಾಗೂ ತಾತಾಚಾರ್ಯರು ಮಾಡಿದ ಅಮೋಘಸೇವೆ ಬಹಳಷ್ಟು ಕಾರಣವಾಗಿದೆ. ಇವರ ಪೂರ್ವಜರಾದ ತಿರುಮಲೈ ಶ್ರೀನಿವಾಸಾಚಾರ್ಯರು ಬಹಳ ಕಾಲ ದೇವಸ್ಥಾನದ ಆಡಳಿತವನ್ನು ನಿರ್ವಹಿಸುತ್ತಿದ್ದರು. ಅರಸರು ತಾತಾಚಾರ್ಯರನ್ನು ದೇವಸ್ಥಾನದ ಶ್ರೀ ಕಾರ್ಯ ಧುರಂಧರರನ್ನಾಗಿ ನೇಮಿಸಿದರು. ಅರಸ ಸಾಮಂತ ಪಾಳೇಗಾರರಿಂದ ದೇವಸ್ಥಾನದ ಅಭಿವೃದ್ಧಿಗೆಂದೇ ಬಂದ ಧನಧಾನ್ಯ ಭೂಮಿ ಮುಂತಾದ ಸಂಪತ್ತುಗ



## ಕೊಡೆಗಳ ನೀಡಿಕೆ ಯೋಜನೆ

ವಿವಿಧ ದೇವಾಲಯಗಳಿಗೆ ಉತ್ಸವಾದಿಗಳಲ್ಲಿ ಬಳಸಲು ಆಲಯೋಪಯೋಗಿ ಕೊಡೆಗಳನ್ನು (ಶ್ವೇತ ಛತ್ರಗಳು) ರಿಯಾಯಿತಿ ದರಗಳಲ್ಲಿ ನೀಡಲು ತೀರ್ಮಾನಿಸಲಾಗಿದ್ದು, ಈ ಯೋಜನೆಯಂತೆ ವಿವಿಧ ದೇವಾಲಯಗಳವರು ಕೊಡೆಗಳಿಗಾಗಿ 50 ಶತಾಂಶ ರಿಯಾಯಿತಿಯ ಹಣ ರೂ. 1000/– ವನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಬ್ಯಾಂಕ್ ಡಿ.ಡಿ.ಯ ರೂಪದಲ್ಲಿ ಕಳುಹಿಸುತ್ತ ಆಯಾ ಜಿಲ್ಲೆಗಳ ಅಸಿಸ್ಟೆಂಟ್ ದೇವಾದಾಯ (ಮುಜರಾಯಿ) ಕಮಿಷನರ್ ಮೂಲಕವಾಗಿ ತಮ್ಮ ಅಭ್ಯರ್ಥನೆಗಳನ್ನು ಕಳುಹಿಸಿದಲ್ಲಿ ಮಾತ್ರವೇ ನೀಡಲಾಗುವುದು. ಕೊಡೆಗಳನ್ನು ತಿರುಪತಿಯಿಂದ ಆಯಾ ದೇವಾಲಯಗಳವರೇ ಕೊಂಡೊಯ್ಯಬೇಕಾಗುವುದು.

ವಿವರಗಳಿಗಾಗಿ ಬರೆಯಿರಿ:---ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇ. ತಿರುಪತಿ.

## ಧ್ವನಿವರ್ಧಕ ವಿತರಣಾಯೋಜನೆ

ವಿವಿಧ ಹಿಂದೂ ದೇವಾಲಯಗಳಲ್ಲಿ ಧಾರ್ಮಿಕ ಕಾರ್ಯಕ್ರಮಗಳ ಪ್ರಸಾರಕ್ಕಾಗಿ ತಿ. ತಿ.ದೇ. ಗಳ ವತಿಯಿಂದ ಧ್ವನಿವರ್ಧಕಗಳನ್ನು ರಿಯಾಯಿತಿ ದರದಲ್ಲಿ ನೀಡುವ ಯೋಜನೆಯಿದೆ. 50 ಶತಾಂಶ ರಿಯಾಯಿತಿಯಲ್ಲಿ ನೀಡಲಾಗುವ ಧ್ವನಿವರ್ಧಕಗಳಿಗಾಗಿ ದೇವಾಲಯಗಳವರು ನೀಡಬೇಕಾದ ಮೊತ್ತ ರೂ. 3370/– ಈ ಹಣಕ್ಕೆ ಬ್ಯಾಂಕ್ ಡಿ.ಡಿ.ಯನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಪಡೆದು ಆಯಾ ಜಿಲ್ಲೆಯ ಅಸಿಸ್ಟೆಂಟ್ ಮುಜರಾಯಿ ಕಮಿಷನರ್ ಅವರ ಮೂಲಕ ತಮ್ಮ ಅರ್ಜಿಗಳನ್ನು ಕಳುಹಿಸಬಹುದು.

ವಿವರಗಳಿಗಾಗಿ ಬರೆಯಿರಿ :
**---ಕಾರ್ಯನಿರ್ವಹಣಾಧಿಕಾರಿ,**
ತಿ.ತಿ.ದೇ. ತಿರುಪತಿ.

ಳನ್ನು ನಿರ್ವಂಚನೆಯಿಂದ ಸದ್ವಿನಿಯೋಗ ಮಾಡುತ್ತಿದ್ದರು. ಇಂದು ನಾವು ಕಾಣುವ ದೇವಸ್ಥಾನದ ಪೂರ್ಣರೂಪ ಕೃಷ್ಣದೇವರಾಯ, ಅಚ್ಯುತರಾಯ, ಅಳಿಯರಾಮರಾಯ ವೆಂಕಟಪತಿ ದೇವ ಮಹಾರಾಯ ಮುಂತಾದ ದೊರೆಗಳು ಮಾಡಿದ ಅಮೋಘ ಸೇವೆಯಿಂದಲೇ. ೧೦೦ ಕಾಲಿನ ಮಂಟಪ (ಕಲ್ಯಾಣಮಂಟಪ) ಕಲ್ಯಾಣ ಕೋಟಿ ವಿಮಾನ (ತಾಯಾರ್‌ಸನ್ನಿಧಿ) ಮುಖಮಂಟಪ, ಅಭಿಷೇಕ ಮಂಟಪ, ಪ್ರಾಕಾರಗಳು ಹಾಗೂ ರಾಜ ಗೋಪುರಗಳ ನಿರ್ಮಾಣ ಅಯ್ಯಂಕೊಳಂ (ತೂಪಿಲ್ ಸಮೀಪ) ತಾತ ಸಮುದ್ರ (ತೆನ್ನೇರಿ ಬ್ಯಾಂಕ್--ಕಂಚಿ ವಾಲಾಜರಸ್ತೆ ನಡುವೆ) ಪುಣ್ಯಕೋಟಿ ಕಲ್ಯಾಣಕೋಟಿ ವಿಮಾನಗಳಿಗೆ ಚಿನ್ನದ ರೇಕು, ಉತ್ಸವಗಳಿಗೆ ವಿವಿಧ ವಾಹನ, ವರಮಾನಬರುವಂಥಾ ಚರಾಚರ ಆಸ್ತಿಗಳು ಮುಂತಾದ ಸತ್ಕಾರ್ಯಗಳು ತಾತಾಚಾರ್ಯ -- ಅರಸರ ಸಹಕಾರದಿಂದ ನಡೆಯಿತು.

ತಾತಾಚಾರ್ಯರ ದಕ್ಷ ಆಡಳಿತವನ್ನು ಹಾಗೂ ಹಿಂದಿನಿಂದ ಬಂದ ವಡಹಲೈ ಸಂಪ್ರದಾಯವನ್ನು ಬದಲಾಯಿಸುವ ಭಗೀರಥ ಪ್ರಯತ್ನಗಳನ್ನು ಗಮನಿಸಿದ ಬ್ರಿಟಿಷರಿಗೆ ದೇವಸ್ಥಾನದ ಬಗ್ಗೆ ಹಾಗೂ ತಾತಾಚಾರ್ಯರ ಬಗ್ಗೆ ಸಹಾನುಭೂತಿ ಹಾಗೂ ಒಳ್ಳೆ ಅಭಿಪ್ರಾಯವಿತ್ತು. ಯುದ್ಧ ಸಂಯೋಜನೆಗಾಗಿ ರಾಬರ್ಟ್‌ಕ್ಲೈವ್ ಕಂಚಿಗೆ ಬಂದಿದ್ದ. ಇನ್ನೇನು ಹೈದರಾಬಾದಿಗೆ ತೆರಳಲು ಸಿದ್ಧನಾಗುತ್ತಿದ್ದಾಗ ಅಕಸ್ಮಾತ್ತಾಗಿ ವರದರಾಜನ ಉತ್ಸವ ಇವನ ಕಣ್ಣಿಗೆ ಬಿತ್ತು. ಅರ್ಚೆಯ ಸೊಬಗಿಗೆ ಮಾರು ಹೋಗಿ ವಶೀಕರಣವಂತೆ ಇದ್ದ ಕೆಲಸ ಬಿಟ್ಟು ಉತ್ಸವವನ್ನೇ ನೋಡುತ್ತಾ ಕುಳಿತ. ತಾತ ದೇಶಿಕರನ್ನು ಕರೆಯಿಸಿ ದೇವಸ್ಥಾನದ ಪುರಾಣೇತಿಹಾಸವನ್ನು ತಿಳಿದು ಮೆಚ್ಚುಗೆಯ ಸಾಂಕೇತಿಕವಾಗಿ ಬಂದು ರತ್ನಖಚಿತವಾದ ಪದಕವನ್ನು ದೇವರಿಗೆ ಸಮರ್ಪಿಸಿದ. ಇದೇ ಮಕರಕಾಂತಿ ಪದಕ. ಬ್ರಹ್ಮೋತ್ಸವದಲ್ಲಿ ಇದನ್ನು ದೇವರಿಗೆ ಧರಿಸಲಾಗುವುದು.

## ಜೀಯರರ ಪ್ರವೇಶ :

ದಂಡನಾಯಕ ತೋದರ್‌ಮಲ್ ಕರ್ನಾಟಕದ ನವಾಬ ಸಾದತ್ತುಲ್ಲಾಖಾನನ ಕೈಕೆಳಗಿದ್ದರೂ, ಇವನಿಗೆ ಆಂಧ್ರದ ಅತ್ತಾನ್‌ಜೀಯರ್ ಎಂಬ ಗುರುವಿದ್ದರು. ಅಂದು ಶ್ರೀಕಾರ್ಯ ಧುರಂಧರರಾಗಿದ್ದ ಏಟೂರ್ ಲಕ್ಷ್ಮೀಕುಮಾರತಾತ ದೇಶಿಕರು ರಾಜಕಾರ್ಯದ ಸಲುವಾಗಿ ಮೈಸೂರಿಗೆ ನಿರ್ಗಮಿಸಿದ್ದರು. ವಿಷಯ ತಿಳಿದು ಪಶ್ಚಾತ್ತನೆ ಕಂಚಿಗೆ ಧಾವಿಸಿ ಉತ್ಸವರನ್ನು ಸಮೀಪದ ಉದಯ್ಯಾರ್ ಪಾಳ್ಯಂಗೆ ಸ್ಥಳಾಂತರಿಸಿದರು. ಯುದ್ಧಸ್ತಂಭನವಾದರೂ ಉದಯ್ಯಾರ್ ಪಾಳ್ಯಂನ ಜಮಿನ್ದಾರನು ಮೂರ್ತಿಯನ್ನು ಕೊಡಲು ನಿರಾಕರಿಸಿದ. ತಾತದೇಶಿಕರು ಅತ್ತಾನ್ ಜೀಯರರನ್ನು ಮೊರೆಹೊಕ್ಕರು. ಜೀಯರರು ತಮ್ಮ ಶಿಷ್ಯನಾದ ತೋದರ್‌ಮಲ್‌ಗೆ ವಿಷಯ ತಿಳಿಸಿದರು. ಒಂದು ಪ್ರಾತಃಕಾಲ ಇದ್ದಕ್ಕಿದ್ದಂತೆಯೇ ತೋದರ್‌ಮಲ್ ಸೈನಿಕಪಡೆಯೊಂದಿಗೆ ಜಮಿನ್ದಾರನ ಮನೆಗೆ ನುಗ್ಗಿ ವರದಮೂರ್ತಿಯನ್ನು ವಶಪಡಿಸಿಕೊಂಡು ತಾತದೇಶಿಕರಿಗೆ ಒಪ್ಪಿಸಿದ. ಸಂತಸಗೊಂಡ ತಾತದೇಶಿಕರು ಜೀಯರರಿಗೆ ಕೃತಜ್ಞತೆ ಸಲ್ಲಿಸುತ್ತ ಜೀಯರರ ಸೇವೆಗೆ ಪ್ರತಿಯಾಗಿ ಏನನ್ನು ಬೇಕಾದರೂ ಕೊಡುವೆನೆಂದು ಹೇಳಿದರು. ತಮ್ಮ ಆಚಾರ್ಯರಾದ ಮಣವಾಳ ಮುನಿಗಳನ್ನು ಪ್ರಕಾಶಪಡಿಸುವ ಉದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡು 'ಶ್ರೀ ಶೈಲೇಶದಯಾಪಾತ್ರಂ ತನಿಯನನ್ನು ಶಾತ್ತುಮೊರೈ ವೇಳೆಯಲ್ಲಿ ಪಠಿಸಿದರೆ ಸಾಕು' ಎಂದು ಜೀಯರರು ಹೇಳಿದ್ದಕ್ಕೆ ತಾತದೇಶಿಕರು ಒಪ್ಪಿಕೊಂಡರು.

ಗೋದಾದೇವಿಯ ಮಧುರ ಭಕ್ತಿಪ್ರಸಂಗದಂತೆ ಇಲ್ಲಿಯೂ ಕೂಡ 'ಮಲೆಯಾಳ ನಾಚ್ಚಿಯಾರ್' ಎಂಬ ಚೇರ ದೇಶದ ರಾಜಕುಮಾರಿಯ ಸ್ವಾರಸ್ಯಕಥೆ ಇದೆ. ಒಂದು ಕಾಲದಲ್ಲಿ ಕಂಚಿ ಚೇರದೇಶದ ರವಿವರ್ಮ ಕುಲಶೇಖರನ ಅಧೀನಕ್ಕೆ ಒಳಪಟ್ಟಿತ್ತು. ಇವನ ಮಗಳು ವರದರಾಜನ ಸೌಂದರ್ಯಕ್ಕೆ ವಶಳಾಗಿ ಭಕ್ತಿಯು ಅಧಿಕವಾಗಿ ವರದರಾಜನನ್ನೇ ವಿವಾಹವಾಗುವೆನೆಂದು ಪಣತೊಟ್ಟಳು. ರಾಜನಿಗೆ ಇವಳ ಮಧುರ ಭಕ್ತಿ ಸಮಸ್ಯೆಯಾಗಿ ಭಗವಂತನನ್ನೇ ಮೊರೆಹೊಕ್ಕ. ಪರಿವಾರ ಸಮೇತ ಹಸ್ತಿಗಿರೀಶನನ್ನು ಆರಾಧಿಸುತ್ತಿರುವಾಗಲೇ ರಾಜಕುಮಾರಿ ಗರ್ಭಗುಡಿ ಪ್ರವೇಶಿಸಿ ಅರ್ಚೆಯಲ್ಲೇ ಐಕ್ಯಳಾದಳು. ಈ ಪ್ರಸಂಗ ಸೂಚಿಸುವ ಚಿತ್ರವನ್ನು ದೇವಸ್ಥಾನದ ಗೋಡೆಗಳ ಮೇಲೆ ನೋಡಬಹುದು.

ದೇವಸ್ಥಾನವು ಧನುರಾಕಾರವಾಗಿದೆ. ರಾಮ, ಕೃಷ್ಣ, ನೃಸಿಂಹ, ವರಾಹ, ರಂಗನಾಥ, ಧನ್ವಂತರಿ ಅನಂತ, ಗರುಡ, ವಿಶ್ವಕ್ಸೇನ, ಹನುಮಾನ್ ಸನ್ನಿಧಿಗಳಿವೆ. ಹಸ್ತಿಗಿರಿಯನ್ನು ಹತ್ತಿಹೋಗಲು ಇರುವ ೨೪ ಹಂತಗಳು ೨೪ ತತ್ವಗಳು ಹಾಗೂ ಗಾಯತ್ರಿ ಮಂತ್ರಕ್ಕೆ ಸಮಾನ ಎಂದು ಹೇಳುವರು. ಇದು ವಡಹಲೈ ಸಂಪ್ರದಾಯದ ಪ್ರಧಾನಕ್ಷೇತ್ರ. ದೇವಸ್ಥಾನದ ಪ್ರಮುಖ ಭಾಗಗಳಲ್ಲಿ ಮೂಲೆ ಮೂಲೆಗಳಲ್ಲಿ ಕಂಭಗಳಲ್ಲಿ ವಡಹಲೈ ನಾಮಗಳು ವ್ಯಾಪಿಸಿವೆ. ಹೊರ ಪ್ರಾಕಾರದಲ್ಲಿರುವ ಅನಂತ ಸರಸ್ಸಿನಲ್ಲಿ

ಅತ್ತಿವರದ ಮೂರ್ತಿಯನ್ನು ಮುಳುಗಿಸಿರುವರು. ೪೦ ವರ್ಷಗಳಿಗೊಮ್ಮೆ ಇದನ್ನು ಮೇಲಕ್ಕೆ ತೆಗೆದು ಆರಾಧಿಸುವರು. ಇದಕ್ಕೆ ಸೇರಿದಂತೆ ತೀರ್ಥವಾರಿ ಮಂಟಪ ಹಾಗೂ ಚಕ್ರತ್ತಾಳ್ವಾರರ ಸನ್ನಿಧಿಗಳಿವೆ. ಇಲ್ಲಿ ಸುದರ್ಶನ ನೃಸಿಂಹಮೂರ್ತಿ ಯೋಗಾರೂಢನಾಗಿ ೪ ಕೈಗಳಲ್ಲೂ ಚಕ್ರಗಳನ್ನು ಧರಿಸಿದ್ದಾನೆ. ಅರುಳಾಳಪುಟ್ಟೇರಿ ಹಾಗೂ ದೇವರಾಜಕೊಳಂ ಎಂಬ ಪುಷ್ಕರಣಿಗಳೂ ಇವೆ. ಭಗವದ್ರಾಮಾನುಜರು ತೀರ್ಥಕೈಂಕರ್ಯ ಆರಂಭಿಸಿದ ಶಾಲಕಣರ್ ಎಂಬ ಬಾವಿಯು ದೇವಸ್ಥಾನದಿಂದ ಸುಮಾರು ಒಂದುವರೆ ಕಿ. ಮಿ. ದೂರದಲ್ಲಿದೆ. ಹಲ್ಲಿ ಪತನ ದೋಷ ನಿವಾರಣೆಗಾಗಿ ಚಿನ್ನ ಹಾಗೂ ಬೆಳ್ಳಿ ಹಲ್ಲಿಗಳಿವೆ. ಇಲ್ಲಿರುವ ನಮ್ಮಾಳ್ವಾರ್ ಮೂರ್ತಿಯು ವೈಶಿಷ್ಟ್ಯಪೂರ್ಣವಾಗಿದೆ. ಬೇರೆಡೆಗಳಲ್ಲಿ ಜ್ಞಾನ ಮುದ್ರೆ ಹಾಗೂ ಎಡಗೈನಲ್ಲಿ ಪುಸ್ತಕವಿದ್ದರೆ ಇಲ್ಲಿ ಅವರ ಬಲ ಹಸ್ತ ಹೃದಯವನ್ನು ಮುಟ್ಟಿದೆ. 'ತುಯರರು ಶುಡರಡಿ ತೊಳುದು ಎಳು ಎನ್ನನನೆ' ಎಂಬ ಪಾಶುರವನ್ನು ಇದಕ್ಕೆ ಹೋಲಿಸಲಾಗಿದೆ (೧-೧-೧) 'ಎಲೈ ನನ್ನ ಮನವೆ ಸಕಲ ದುಃಖವನ್ನು ಹೋಗಲಾಡಿಸುವ ಅವನ ಪಾದಾರವಿಂದಗಳನ್ನೇ ಭಜಿಸಿ ಉಜ್ಜೀವಿಸು' ಎಂದು ಹೇಳಿ ಪರಮಾತ್ಮನ ಉಪಕಾರವನ್ನು ಸ್ಮರಿಸಿ ಸ್ಮರಿಸಿ ವಿಸ್ಮಯ ಹೊಂದಿರುವರು.

ಎಲ್ಲಾ ದಿವ್ಯಕ್ಷೇತ್ರಗಳ ಮೂಲ ಮೂರ್ತಿಗಳ ಪೈಕಿ ವರದರಾಜನು ಅತ್ಯಂತ ಚೆಂದುಳ್ಳಮೂರ್ತಿ ಎಂದು ಪ್ರಸಿದ್ಧಿಯಾಗಿದೆ. ಈ ಮೂರ್ತಿಯು ಅಗ್ನಿಕುಂಡದಿಂದ ಆವಿರ್ಭವಿಸಿದಂತೆ ಹಾಗೂ ನಗುತ್ತಿರುವಂತೆ ಭಾಸವಾಗುವುದು. 'ನತ್ಸಾವದ್ವಿನ ಸಹಸ್ರ ಸೂರ್ಯ ಅನು' ಎಂದು ಋಗ್ವೇದವು ವರದನ ತೇಜೋಮಯತ್ವವನ್ನು ಕೊಂಡಾಡುವುದು. 'ಇವನನ್ನು ನೋಡಿದ ಮೇಲೆ ನನಗೆ ಮೋಕ್ಷ -- ವೈಕುಂಟದ ಮೇಲೆ ಆಸೆಯೇ ಮೂಡದು -- ವೈಕುಂಟವಾಸೇ ಅಪಿ ನ ಮೇಃಭಿಲಾಷ' ಎಂದು ದೇಶಿಕರು ವರದರಾಜ ಪಂಚಾಶತ್‌ನಲ್ಲಿ ವರ್ಣಿಸಿದ್ದಾರೆ. ಜಯಾಖ್ಯಾ ಹಾಗೂ ಪಾದ್ಮಸಂಹಿತೆಗಳ ಆಧಾರಿತವಾದ ಪಾಂಚರಾತ್ರಾಗಮನ ಪದ್ಧತಿ ಆಚರಣೆಯಲ್ಲಿದೆ. ಪ್ರಾತಃಕಾಲ ಉಭಯವೇದ ಪಾರಾಯಣಗಳೊಂದಿಗೆ ನಿತ್ಯಾರಾಧನ ಆರಂಭವಾಗುವುದು. ಪ್ರತಿ ಶುಕ್ರವಾರ ಮೂಲವರಿಗೆ ಅಭಿಷೇಕವಿರುವುದು.

ಈ ಕ್ಷೇತ್ರವು ನಿತ್ಯೋತ್ಸವಕ್ಕೆ ಪ್ರಸಿದ್ಧಿಯಾದುದು. ವೇಗವತಿ ನದಿದಡದಲ್ಲಿ 'ವಸಂತ ತೋಪು' ಉತ್ಸವದೊಂದಿಗೆ ಚೈತ್ರಮಾಸದ ಉತ್ಸವವು ಆರಂಭವಾಗುವುದು. ಪ್ರತಿ ಏಕಾದಶಿ ಹಾಗೂ ಪ್ರಥಮೆಯಂದು ಪಂಚಪರ್ವ ಉತ್ಸವಗಳು. ಉತ್ಸವಗಳನ್ನು ಬಿಜಯಿಸುವವರನ್ನು ಶ್ರೀಪಾದಂ ಅಥವ ಶ್ರೀಭಾರಂತಾಂಗಿಯಾಳ್ ಎಂದು ಕರೆಯುವರು.



ಎಲ್ಲಾ ಉತ್ಸವಗಳಲ್ಲಿ ತಿರುಚಿನ್ನಂ ಎಂಬ ವಿಶೇಷವಾದ ತುತ್ತೂರಿ ವಾದ್ಯವನ್ನು ನುಡಿಸುವರು. ಜಗದ್ವಿಖ್ಯಾತ ಗರುಡೋತ್ಸವ ಹಾಗೂ ಕಾರ್ತೀಕೋತ್ಸವ ವರ್ಷದ ಎರಡು ಭಾರಿ ಉತ್ಸವಗಳು. ವೈಶಾಖ ಮಾಸದ ೧೦ ದಿನಗಳ ಬ್ರಹ್ಮೋತ್ಸವದಲ್ಲಿ ೩ನೆಯ ದಿನ ಜರುಗುವುದೇ ಗರುಡೋತ್ಸವ. ಇದರಲ್ಲಿ ವೇದಗೋಷ್ಠಿಗೆ ಸೇರುವಷ್ಟು ಭಾಗವತರು ಬೇರಾವ ಉತ್ಸವಗಳಲ್ಲಿಯೂ ಕಾಣಬರುವುದಿಲ್ಲ. ಕಂಚಿ ಕೊಡೆ ಹಿಡಿಯುವುದು ಮತ್ತು ಬದಲಾಯಿಸುವುದು ಕಣ್ಣಿಗೆ ಹಬ್ಬ. ರಾತ್ರೋರಾತ್ರಿ ಉತ್ಸವದ ಸಿದ್ಧತೆ ದೇಶಿಕರ ಸನ್ನಿಧಿಯಲ್ಲಿ ನಡೆಯುವುದು. ಮಹಾದ್ವಾರದಲ್ಲಿ ದೊಡ್ಡಯಾಚಾರ್ಯರ ಕರ್ಪೂರ ಸೇವೆ ಆದ ನಂತರ ಉತ್ಸವವು ತೂಪ್ಪಿಲ್ ಸೇರುವುದು. ಅಲ್ಲಿ ಮಂಗಳಾಶಾಸನ, ಭಾಗವತರುಗಳಿಗೆ ಸಸ್ಮಾನವಾದನಂತರ ಕಾಮಕೋಟಿ ಪೀಠ, ಗಂಗೈಕೊಂಡಾನ್ ಮಂಟಪ, ಪುಷ್ಪಪೇಟೆ, ಸಂಕೀರ್ಣರಥಬೀದಿ, ರಾಜ ಬೀದಿ ಮೂಲಕ ಉತ್ಸವರು ಆಸ್ಥಾನ ಸೇರುವರು. ರಾಜಬೀದಿಯ ಎರಡೂ ಕಡೆಗಳಲ್ಲಿ ಮನೆ ಮುಂದೆ ಹಂತಗಳನ್ನು ನಿರ್ಮಿಸಿರುತ್ತಾರೆ. ಉತ್ಸವಗಳನ್ನು ವೀಕ್ಷಿಸಲು ಇವು ಗ್ಯಾಲರಿ ಸೊಬಗನ್ನು ಕೊಡುವುದು. ಅಂದು ಸಂಗೀತ ಮೇಳದಲ್ಲಿ ನಾದಸ್ವರ ಗೋಷ್ಠಿ ಸಮುದಾಯವು ಕಡ್ಡಾಯವಾಗಿ 'ವಿನತಾಸುತ ವಾಹನುಡೈ ವೆಡಲೆದ ಶ್ರೀ ಕಂಚಿ ವರದ' ಎಂಬ ತ್ಯಾಗರಾಜ ಕೃತಿಯನ್ನು ರಸವತ್ತಾಗಿಯೂ ತೀವ್ರ ಪೈಪೋಟಿಯುತವಾಗಿಯೂ (ಅದರಲ್ಲೂ ತವಿಲ್)ನುಡಿಸಿ ಸಂಗೀತ ರಸದೌತಣವನ್ನು ಕೊಡುವುದು. ಗಂಗಾಬಾಯಿ ಅಮ್ಮಾಳ್ ವಿಶಿಷ್ಟ ಮಂಡಲಿ ವತಿಯಿಂದ ಗರುಡಸೇವೆ ಮುಂದುವರೆಯುತ್ತದೆ. ಹಲವಾರು ವರ್ಷಗಳ ಕಾಲ ಮುಮ್ಮಡಿ ಕೃಷ್ಣರಾಜ ಒಡೆಯರ ಸಮ್ಮುಖದಲ್ಲೇ ಗರುಡೋತ್ಸವ ಜರುಗುತ್ತಿತ್ತು. ೫ ನೆ ದಿನ ಜಾಡಿತಿರುಮಂಜನ ಪನ್ನೀರಿರುವ ಒಂದು ದೊಡ್ಡ ಜಾಡಿಯಲ್ಲಿ ವರದನನ್ನು ಇರಿಸಿ ಅದೇ 'ನೀರಿನಿಂದ ಅಭಿಷೇಕ ಮಾಡುವರು. ಹಣೆಯಲ್ಲಿರುವ ತಿಲಕವನ್ನು ತೆಗೆದು ವಡಹಲೈ ನಾಮವನ್ನು ಧರಿಸುವರು. ಕಾರ್ತಿಕೈ ಅನುಶಂ ಎಂಬ ೧೦ ದಿನಗಳ ಕಾರ್ತೀಕೋತ್ಸವದಲ್ಲಿ ದೇಶಿಕರ ಸನ್ನಿಧಿಯಲ್ಲಿರುವ ತಾತಾಚಾರ್ಯ -- ಲಯ್ಯಂಗಾರುಗಳಿಗೆ ವರದ ದಂಪತಿಗಳು ದರ್ಶನ ಕೊಟ್ಟು ತೀರ್ಥ ಶಠಾರಿ ಮರ್ಯಾದೆಗಳು ಜರುಗುವುದು. ೧೦ ನೇ ದಿನ ತಾತದೇಶಿಕರ ತಿರುನಕ್ಷತ್ರ ಬಹಳ ವೈಭವದಿಂದ ನಡೆಸಲಾಗುವುದು. ಈ ದಿನಗಳಲ್ಲಿ ಬರುವ ಶುಕ್ರವಾರ ತಾಯಾರ್ ಸನ್ನಿಧಿಯಲ್ಲಿ ವಿಶೇಷ ಕಾರ್ಯಕ್ರಮವಿರುವುದು. ಈ ದಿನವೇ ತಾತದೇಶಿಕರಿಗೆ ತಾಯಾರ್ ಅನುಗ್ರಹ

ವಾಗಿ 'ಲಕ್ಷ್ಮೀಕುಮಾರ' ಎಂಬ ಬಿರುದು ಪ್ರಾಪ್ತವಾಗಿದ್ದು.

ಕಂಚಿ ಮತ್ತು ತಿರುವಹೀಂದ್ರಪುರಗಳು ಅಲಂಕಾರಕ್ಕೆಂದೇ ಪ್ರಸಿದ್ಧಿಯಾದ ಕ್ಷೇತ್ರಗಳು. ದೇಶಿಕರ ತಿರುನಕ್ಷತ್ರದಂದು ತೂಪಿಲ್‌ನಿಂದ ಬಂದ ದೇಶಿಕರನ್ನು ವರದನ ತಿರುವಡಿಗಳಲ್ಲಿಡುವರು. ಇದನ್ನು ಸೇವಿಸಿದವರಿಗೆ ಪುನರ್ಜನ್ಮವಿಲ್ಲ ಎಂಬ ಐತಿಹ್ಯವಿದೆ. ಒಳ ಪ್ರಾಕಾರೋತ್ಸವದಲ್ಲಿ ದೇಶಿಕರು ಮೈತುಂಬಿಕೊಂಡಿರುವಂತೆ ಅಲಂಕಾರ ಮಾಡುವರು. ತಾಯಾರ್ ಸನ್ನಿಧಿ ಮುಂದೆ ತಾಯಾರ್ ಉತ್ಸವ ಸೇರಿ ಎದಿರು ಬದಿರು ಉತ್ಸವ ಬಹಳ ಸೊಗಸಾಗಿರುವುದು. ರಾತ್ರಿ ಮರಳಿ ಬರುವ ಉತ್ಸವದಲ್ಲಿ ದಿವ್ಯ ಸೇವೆ ಮುಗಿದುಹೋಯಿತಲ್ಲಾ ಎಂದು ಬೇಸರ ಸೂಚಿಸುವಂತೆ ದೇಶಿಕರು ನಿಧಾನವಾಗಿ ಬರುವರು.

ತಿರುಪತಿಯ ಪುಷ್ಪಯಾಗದಂತೆ ಇಲ್ಲಿಯೂ ಮಾಘಮಾಸದಲ್ಲಿ ವೆಂಕಟಪತಿದೇವ ಮಹಾರಾಯ ನಿರ್ಮಿಸಿದ ದೊರ್ಕೈ ತೋಟದಲ್ಲಿ ದವನೋತ್ಸವ ಜರುಗುವುದು. ಭೋಗಿ ಹಬ್ಬದಂದು ಆಂಡಾಳ್ ಉತ್ಸವವು ದೇಶಿಕರ ಸನ್ನಿಧಿಗೆ ಬರುವುದು. ದೇಶಿಕರನ್ನು ಆಂಡಾಳ್ ತಿರುವಡಿಗಳಲ್ಲಿಡುವರು. ದೇಶಿಕರಿಗೆ ಹಾಗೂ ತಾತದೇಶಿಕ ದಂಪತಿಗಳಿಗೆ ಆಶೀರ್ವಾದ, ಅಲಂಕಾರ, ತಿರುಮಂಜನ ನಂತರ ವರದನ ಆಗಮನ, ನಂತರ ತಿರುಕಲ್ಯಾಣೋತ್ಸವ, ಕಂಚಿಯ ಹೊರಗೆ ಅಯ್ಯಂಕೊಳಂಗೆ ಉತ್ಸವ ಹೊರಟು ಅವಭೃತ ಹಾಗೂ ನಡಬಾವಿ ಉತ್ಸವಗಳು ಜರುಗುವುವು. ವ್ಯಾಸತೀರ್ಥರ ಕಾಲದಲ್ಲಿ ಕೃಷ್ಣದೇವರಾಯ ಸಮರ್ಪಿಸಿದ ಶೇಷವಾಹನದಲ್ಲಿ ಉತ್ಸವವು ಪುಲಂಬಾಕಂ ಎಂಬ ಊರಿಗೆ ಬರುವುದು.

ಲೆಕ್ಕ ಮಾಡಲು ಸಾಧ್ಯವಾಗದಷ್ಟು ವಸ್ತ್ರಾಭರಣಗಳು ವಿವಿಧ ವಾಹನಗಳು ರಾಜಮಹಾರಾಜರುಗಳಿಂದ ಹಾಗೂ ಇವರ ಗುರುಗಳಿಂದ ಬಂದಿರುತ್ತೆ. ವರದನ ಹಣೆಯ ಮೇಲಿರುವ ವಜ್ರದ ವಡಹಲೈ ನಾಮ ಹಾಗೂ ಶಂಖ ಚಕ್ರ ಅಚ್ಯುತರಾಯನಿಂದ, ಇಂತಹದ್ದೇ ಒಂದು ಸೆಟ್ ಆಭರಣಗಳು ಮದ್ರಾಸ್ ನ್ಯಾಯಾಲಯದ ವಿಶ್ರಾಂತ ನ್ಯಾಯಾಧೀಶ ವಿ. ವಿ. ಶ್ರೀನಿವಾಸ ಐಯ್ಯಂಗಾರ್ಯರಿಂದ, ಪಚ್ಚಕಲ್ ಸೆಟ್ ತಂಜಾವೂರು ನರ್ತಕಿಯಿಂದ, ೩ ಮಕರಕಾಂತಿ ಪದಕಗಳು (ತಲಾ ಒಂದೊಂದರಂತೆ) ರಾಬರ್ಟ್ ಕ್ಲೈವ್, ದೇವನಾರ್ ವಿಳಾಪಂ ಅಳಶಿಂಗರ್ ಹಾಗೂ ಅನಂತಾಚಾರ್ ಎಂಬ ಭಕ್ತರಿಂದ, ರತ್ನಖಚಿತವಾದ ಎಚ್ಚಮ ಪದಕ (ಸತ್ಯಪೂರ್ಣಪದಕ) ಉತ್ತರಾದಿ ಮಠದ ಸತ್ಯವಿಜಯ ತೀರ್ಥರಿಂದ, ವೆಂಕಟಾದ್ರಿ ಕೊಡೈ ಎಂಬ ಕಿರೀಟ -- ಕವಿ ವೆಂಕಟಾದ್ರಿಯಿಂದ, ರತ್ನಖಚಿತವಾದ ಕಿರೀಟ, ಕವಚ ಹಾಗೂ ಪದಕಗಳು ಮುಮ್ಮಡಿ ಕೃಷ್ಣರಾಜ ಒಡೆಯರು ಹಾಗೂ ಘಂಟಾವತಾರ ಪರಕಾಲ ಸ್ವಾಮಿಗಳಿಂದ ಹಾಗೂ ದೇವಸ್ಥಾನದವರೇ ಮಾಡಿಸಿರುವ 'ಕೊಪ್ಪವರಂ' ಎಂಬ ವಿಶೇಷವಾದ ಟೋಪಿ ಆಕಾರವಾದ ಕಿರೀಟ (ಬ್ರಹ್ಮೋತ್ಸವದಲ್ಲಿ ಮಾತ್ರ ಅಲಂಕಾರ) ಇತ್ಯಾದಿ.

ಕಂಚಿಯು ವೈಷ್ಣವ -- ಶೈವ -- ಬೌದ್ಧ ಹಾಗೂ ಜೈನ ಮತಗಳ ಸಂಗಮ ಕ್ಷೇತ್ರ. ಬೌದ್ಧ ಯಾತ್ರಿ ಹ್ಯೂಯನ್‌ತ್ಸಾಂಗ್ ಇಲ್ಲಿಗೆ ಭೇಟಿಕೊಟ್ಟಿರುತ್ತಾನೆ. ತ್ರಿಮತಸ್ಥರಿಗೆ ಇಂದಿಗೂ ದೇವಸ್ಥಾನದಲ್ಲಿ ಮರ್ಯಾದೆ ಉಂಟು. ತಾಯಾರ್ ಸನ್ನಿಧಿ ಹಾಗೂ ಕೆಲವುಪ್ರಮುಖ ಭಾಗಗಳಲ್ಲಿ ಸೇವಾನೆನಪಿಗಾಗಿ ಶಂಕರಾಚಾರ್ಯರ ವಿಗ್ರಹವನ್ನು ಕೆತ್ತಲಾಗಿದೆ. ವರದರಾಜ ದಂಪತಿಗಳು ಬೇಡದಂಪತಿಗಳಾಗಿ ಕಾಣಿಸಿಕೊಂಡು ಭಗವದ್ರಾಮಾನುಜರಿಗೆ ಮಾರ್ಗದರ್ಶನ ನೀಡಿದ ಪ್ರಸಂಗ ಶ್ರೀವೈಷ್ಣವ ಸಿದ್ಧಾಂತಕ್ಕೆ ಹೊಸರೂಪು ರೇಖೆಗಳನ್ನು ಕೊಟ್ಟಿತು. ಕೂರೇಶರ ದೃಷ್ಟಾಂತವು ಮತ್ತಷ್ಟು ಒತ್ತು ಕೊಟ್ಟಿತು. ಕಂಚಿಯು ದೇಶಿಕರ ತವರುಮನೆ ಇದ್ದಂತೆ. ಬೇರಾವ ಆಚಾರ್ಯರಿಗೂ ಲಭಿಸದ ಗೌರವಗಳು ದೇಶಿಕರಿಗಿತ್ತು. ಈ ಕ್ಷೇತ್ರ ಅವರ ಉಸಿರೇ ಆಗಿತ್ತು. ನನಗೆ ಪಿತ್ರಾರ್ಜಿತವಾದ ಸ್ವತ್ತು ಯಾವುದಾದರೂ ಇದ್ದಲ್ಲಿ ಅದು ಹಸ್ತಿಗಿರಿಯೇ -- 'ನಾಸ್ತಿ ಪಿತ್ರಾರ್ಜಿತಂ ಕಿಂಚಿತ್ ನಮಯಾ ಕಿಂಚಿತ್ ಆರ್ಜಿತಂ, ಅಸ್ತಿಮೇ ಹಸ್ತಿಶೈಲಾಗ್ರೇ ವಸ್ತು ಪೈತಾಮಹಂ ಧನಂ' ಎಂದು ವೈರಾಗ್ಯಪಂಚಕದಲ್ಲಿ ವ್ಯಕ್ತಪಡಿಸಿದ್ದಾರೆ. ಹಸ್ತಿಗಿರಿಯ ಖ್ಯಾತಿಗೆ ದೇಶಿಕರು ಬಹುಮಟ್ಟಿಗೆ ಕಾರಣರಾಗಿದ್ದಾರೆ ಎಂದು ಹೇಳಿದರೆ ತಪ್ಪಾಗಲಾರದು.

ಇದು ಆಳ್ವಾರ್ ಹಾಡಿದ ಕ್ಷೇತ್ರವೇ? ನಮ್ಮಾಳ್ವಾರರ ತಿರುವಾಯ್ ಮೊಳಿಯಲ್ಲಿ (೧-೧-೧) ಅಮರರ್‌ಪಳ್ ಅಧಿಪತಿ, ಕಲಿಯನರು ಯಥೋಕ್ತಕಾರಿಯನ್ನೇ (ತಿರುವೇಕ್ಕಾ) ಕರಿವರದ ಎಂದು ಹೇಳಿರುವುದು ಹಾಗೂ ಇವರ ಕನಸಿನಲ್ಲಿ ವರದನು ಪ್ರಸನ್ನನಾಗಿ ವೇಗವತಿ ನದಿ ದಡದಲ್ಲಿರುವ ಸಿಧಿಯನ್ನು ಸೂಚಿಸಿದ ಪ್ರಸಂಗ ಹಸ್ತಿಗಿರಿಯನ್ನು ದಿವ್ಯಕ್ಷೇತ್ರವನ್ನಾಗಿ ಮಾಡಿದೆ. 'ಮುನಿಸಾರ್ವಭೌಮರು (ಆಳ್ವಾರರು) ವರದನ ತೇಜೋರೂಪವನ್ನು ನೋಡಿ ಏನೂ ತೋಚದೆ ಸ್ತುತಿಸದೇ ಮೂರ್ಛೆ ಹೋದರು. --'ಯಸ್ಯಾನುಭಾವಂ ಅಧಿಗಂತುಂ ಅಶಕ್ತುವಂತಃ ಮಹ್ಯಂತ ಭಂಗುರದಿಯಃ ಮುನಿ ಸಾರ್ವಭೌಮಾಃ' ಎಂದು ದೇಶಿಕರು ವರದರಾಜ ಪಂಚಾಶತ್‌ನಲ್ಲಿ ವರ್ಣಿಸಿದ್ದಾರೆ. ವರದಮೂರ್ತಿ ಪ್ರಾಚೀನವಾದರೂ ಗುಡಿ ಗೋಪುರಗಳ ಅಸ್ತಿತ್ವಕ್ಕೆ ಬಂದದ್ದು ೧೧ ನೆಯ ಶತಮಾನದ ಸುಮಾರಿಗೆ, ಒಟ್ಟಿನಲ್ಲಿ ಹೇಳುವುದಾದರೆ ಆಳ್ವಾರರುಗಳ ವರದನನ್ನು ನೇರವಾಗಿ ಹಾಡಿಲ್ಲ.

ಶ್ರೀವತ್ಸ ಚಿಹ್ನ ಮಿಶ್ರರ ವರದರಾಜಸ್ತವ; ದೇಶಿಕರ ಕೃತಿಗಳು ಮಣವಾಳ ಮುನಿಗಳ 'ದಿವ್ಯದೇಶ ಸಂಗ್ರಹ ಶ್ಲೋಕಮಾಲಿಕೆ, ಮುತ್ತುಸ್ವಾಮಿ ದೀಕ್ಷಿತರ ೩ ಕೃತಿಗಳು, ಪುರಂದರ ದಾಸರ ಪ್ರಸಿದ್ಧಿಯಾದ ಯಾವ ವರನನ್ನು ವರಿಸುವೆಯೋ ಮಹಾಲಕ್ಷ್ಮಿಯೇ--ಪದ್ಯ ಈ ಕ್ಷೇತ್ರದ ಹಿರಿಮೆಯನ್ನು ಎತ್ತಿ ಹಿಡಿದಿದೆ. 'ಹೊಮೊರೊ ಜೆಗೋಣ್ಣೊತೋಜಿ' ಎಂದ ಪೂರಿಭಕ್ತ ಜನರು ದೇವರನ್ನು ಅತ್ಯಂತ ಸ್ನೇಹಭಾವದಿಂದ ಕಾಣುವಂತೆ, ಇಲ್ಲೂ 'ಆಗಲೆ ವರದ ಬಂದು ಹೋಗಿ ಆಯಿತು' ಎಂದು ಉತ್ಸವ ನೋಡದಿರುವವರಿಗೆ ಸಿಗುವ ಆತ್ಮೀಯ ಭಾವ ಉಳ್ಳ ಉತ್ತರ.

ಛಳಿಗಾಲದಲ್ಲಿ ಮಾತ್ರ ಕಂಚಿಯ ಎಲ್ಲಾ ದಿವ್ಯಕ್ಷೇತ್ರಗಳನ್ನು ನಿಧಾನವಾಗಿ ಸುಖಕರವಾಗಿ ಸೇವಿಸಬಹುದು. ಮಿಕ್ಕ ಕಾಲದಲ್ಲಿ ಉಷ್ಣಾಂಶ ಹೆಚ್ಚಿರುವುದರಿಂದ ಸೇವೆ ಕಷ್ಟವಾಗುವುದು. ಆಟೋರಿಕ್ಷಾ ಗೊತ್ತುಮಾಡಿಕೊಂಡು ಬೆಳಗಿನಿಂದ ಸಂಜೆಯವರೆಗೆ ೧೮ ದಿವ್ಯ ಕ್ಷೇತ್ರಗಳನ್ನು ಸೇವಿಸಬಹುದು. ಮಠ ಆಶ್ರಮಗಳಲ್ಲಿ ತಂಗಲು ಸೌಕರ್ಯವಿದೆ.





# ರಜಕ ರಾಜನಾದದ್ದು

---ಶ್ರೀಮತಿ ಸತ್ಯವತಿ.



ಬಿನ್ನಪವ ಲಾಲಿಪುದು ಗುರುವೇ
ಗನ್ನಮಹಿಮಾ ಪಾದ ಯತಿಗಳ
ಪೊನ್ನಚರಿತೆಯ ಕೇಳ್ವಬಯಕೆಯು ಅಂತರಂಗದೊಳು
ಇನ್ನು ಮುಂದಕೆ ಎತ್ತ ಪೋದರು
ಸನ್ನುತವರ ಗುರು ಯತಿಗಳೆಂಬು
ದ ನಲುಮೆಯಲಿ ತಿಳಿಯಲುಲಿವುದೆನು ತೆರಗಿದನುಪವಕೆ

ಪದದೊಳೆರಗಿದ ಭಕ್ತನೇಳಿಸಿ
ಮುದದೆ ಹರಸಿದ ಸಿದ್ಧರವನಿಗೆ
ಪದುಮನಾಭನ ವಿಮಲ ಚರಿತೆಯ ಬಿಡದೆ ಪೇಳಿದರು
ಪದವ ಬಿಡು ನೀ ಮೇಲೆ ಏಳೈ
ಪದವ ಕೊಡುವಾ ಕತೆಯ ಪೇಳುವೆ
ಪದದಿ ನುಡಿವೆನು ಗುರುವ ಮಹಿಮೆಯ ಪಾದ ಯತಿವರನ

ಕುರುವ ಪುರದೊಳು ಗುರುವು ನೆಲೆಸಿರೆ
ವರವ ಕೋರಿದ ರಜಕನೋರ್ವನು
ಭರದಿ ಪಡೆದಾ ರಾಜ್ಯಪದವಿಯ ದೇಶಕೋಶಗಳ

ಆರಿಗಾದರು ವರವ ನೀವರು
ಗುರುವ ಕರುಣೆಯು ಹಿರಿದು ಎಲ್ಲಕು
ಸಿರಿಯ ತರುವುದು ಬಯಸಿದೊಡನೆಯೆ ತಡವಮಾಡವೆಲೆ

ಗುರುವೆ ಕರುಣಿಪುದು ವಿವರಿಸುವುದು
ವರಗುರುವ ವೃತ್ತಾಂತವನೆನಗೆ
ಕರುಣೆತೋರ್ವುದು ಪಾವನ ಗೊಳಿಸುವುದು ಜನುಮವನ್ನು
ಕುರುವ ಪುರದಲಿ ರಜಕರಾಜಗೆ
ಕರುಣೆಯಾದುದ ತಿಳಿದು ಪೇಳ್ವುದು
ವರವ ದೇವರು ಇತ್ತರೆನುವುದ ಬಿಡಿಸಿ ತಿಳಿಸುವುದು

ಅಂದು ಅಂಬಿಕೆ ವರವ ಪಡೆಯಲು
ಮುಂದು ನಡೆದುದು ಬಹಳ ಮಹಿಮೆಯು
ಚಂದದಿಂದಲಿ ಗುರುವು ಕುರುವಪುರದಲಿ ನೆಲೆಸಿರಲು
ಬಂದು ನಿತ್ಯದಿ ಸ್ನಾನಗೈವರು
ಸಂದ ಸಂಗಮ ನದಿಗಳಲ್ಲಿ
ಬಂದ ಭಕ್ತರ ಕರುಣಿಸುತಲ್ಲಿ ಪಾದ ಯತಿವರರು

ನಿತ್ಯದಲಗಸನೊಬ್ಬನು ಬರುವನು
ಸತ್ಯಮೂರುತಿ ಗುರುವ ಕಾಣುತ
ಸತ್ಯದಿಂದಲಿ ನಮಿಸಿ ನಡೆವನು ಪರಿವಿಡಿಯಲಂತೆ
ಇಂತು ದಿನಗಳು ಉರುಳಿಪೋಗಲು
ಬಂತು ದಿನವದು ಬಾಳಲಗಸನ
ಅಂತರಂಗವ ತಿಳಿದು ವರವನು ನೀಡುವಾ ಚಣವು

ನದಿಗೆ ಬರುವನು ದಿನವುರಜಕನು
ಉದರ ಪೋಷಣೆಗಾಗಿ ನಿತ್ಯವು
ವಿಧವ ಬಟ್ಟೆಗಳೊಗೆದು ಶುದ್ಧಿಯ ಮಾಡುತೊಗೆಯುವನು
ನದಿಗೆ ಬರುತಿರೆ ಗುರುವು ನಿತ್ಯವು
ಉದಯ ಸಮಯದಿ ಮಿಂದು ಜಪಿಸಲು
ನದಿಯ ತೀರದಿ ಕಾಣುತಗಸನು ಮಣಿವ ನಿತ್ಯದಲಿ

ಕಸವನುಡುಗುತ ಮಠದ ಮುಂದಿನ
ಗಸಬಳಿದು ಸಾರಿಸಿ ಹಸನ ಮಾ
ಡಾಸ್ಥೆಯಿಂದಲಿ ಕಾದು ನಿಲುವನು ಗುರುವ ಬರವನ್ನು
ಏಸು ದಿನಗಳು ಕಳೆದು ಹೋದರು
ಮಾಸಲಿಲ್ಲವು ಅವನ ಭಕುತಿಯು
ವಾಸುದೇವನ ರೂಪ ಗುರುವನು ಮೆಚ್ಚಿಸುವ ಪರಿಯು

ಒಂದು ದಿನವದು ನಿತ್ಯದಂದದಿ
ಬಂದನಗಸನು ಕಸವ ಬಳಿದನು
ಬಂದು ನಿಲ್ಲಲು ಗುರುವ ಕಾಣಲು ಕಂಡನರಸನನು
ಬಂದು ನಿಂದವು ಸಕಲ ಪಡೆಯದು
ಚಂದದೊಳರಸ ತಾನು ಇಳಿದ ರ
ಥದ ಕೆಳಗೆ ಸುತ್ತಿ ಬರುತಿಹ ಪರಿವಾರದೊಡನಾಗ

ನೋಡಿದನಗಸ ತಾನು ದೊರೆಯನು
ನೋಡಿದನವನ ಶೀವಿ ವೈಭವ
ಆಡುತಾಡುತ ಬರುವವನನು ಸಕಲ ಪರಿಜನರನು
ನೋಡು ನೋಡುತ ಮನದಲಾದುದು
ಪಡಲು ಸುಖವನು ರಾಜ್ಯ ಬಯಕೆಯು
ಆಡುಮಾತಿನ ಬಯಕೆಯಲ್ಲವು ದೇಕದಕೆಪ್ಪಣ್ಯ

ಚಿಂತಿಸುತ ಮೈಮರೆತನಗಸನು
ಇತ್ತ ಬಂದಿಹ ಗುರುವ ಮರೆತನು
ಅಂತರಂಗವನರಿವ ಗುರುಗಳು ನಸುನಗುತ್ತ ನುಡಿದು
ಎತ್ತಲಿಹುದೈ ಅಗಸ ನಿನ್ನಯ
ಚಿತ್ತವೃತ್ತಿಯು ಇಂತಿದೇತಕೆ
ಚಿತ್ತವಾಯಿತು ರಾಜ್ಯದಾಹಕೆ ಸರಿಯೆ ನೀ ಪೇಳು

# ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಬರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

***ಶ್ರೀ ಗೋವಿಂದರಾಜಸ್ವಾಮಿ ದೇವಾಲಯ***
***ಶ್ರೀ ಕೋದಂಡರಾಮಸ್ವಾಮಿ ದೇವಾಲಯ***
***ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು***
***ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ***
***ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ***

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು. (೨ ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ ೬--೦೦, ಬೆಳಗ್ಗೆ ೧೦--೦೦, ಸಂಜೆ ೩--೦೦

ಬಸ್ ಪ್ರಯಾಣದ ದರ : ಒಂದು ಟಿಕೆಟ್ಟಿಗೆ ೨೦ ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

***ತಿ. ತಿ. ದೇ.***

ಗುರುವು ಮನದಿಂಗಿತವ ನುಡಿದಿರ
ಲಾರಜಕ ನಾಚಿದನು ಮನದಲಿ
ಶರಣು ಗುರುವೇ ಮನ್ನಿಸುವುದೆನ್ನ ಚಪಲತೆಗಾಗಿ
ಅರಿವು ಹೋದುದು ದೊರೆಯ ನೋಡಿರೆ
ಮರೆತನದರಲಿ ಮನವ ನಾನ್ಯೆ
ಅರಿವು ನೀಡುತ ಪೊರೆಯುವುದೆನುತೆರಗಿದನು ಪದದೊಳು

ರಾಜವಂಶದಿ ಹುಟ್ಟುವಾಸೆಯು
ರಾಜ್ಯಪದವಿಯ ಪಡೆಯುವಾಸೆಯು
ರಜಕ ನಿನಗಾದುದನು ಬಲ್ಲೆನು ವರವನಿತ್ತೆನು ನಾ
ರಾಜವಂಶದಿ ಹುಟ್ಟಿ ಬೆಳೆಯುತ
ರಾಜ ಭೋಗವ ಸವಿದ ಬಳಿಕವೆ
ರಜಕ ನೀನೆಮ್ಮ ಬಳಿಗೆ ಬರುವುದು ದರುಶನಕೆ ಎಂದರು

ಜಗದ ಭೋಗಕೆ ನಾನು ಗೈದೆನು
ಜಗದ ಜನಕನು ನಿನ್ನ ಮರೆತೆನು
ಜಗವ ನೀಡುವ ಶಕ್ತ ದೇವರ ಕಿಲುಬ ಬೇಡಿದೆನು
ನಗಧರನು ನೀನೆಂಬ ಮಾತನು
ಅಂಗಮೋಹದಿ ಮರೆತು ಮೆರೆದೆನು
ನಂಗ ಭಸಿತನೆ ಕಾವುದೆನ್ನನು ಮತಿಯ ನೀಡುತಲಿ

ಹಲವು ಬಗೆಯಲಿ ಬೇಡಲಗಸನ
ಮಲಚರಿತ ಶ್ರೀಪಾದರವನನು
ಹಲವು ಮಾತಲಿ ಸಂತಯಿಸುತಾನಿಂತು ನುಡಿದಿರಲು
ಎಲವೊ ರಜಕನೆ ಆಸೆಯೆನುವುದು
ಹಲವು ತೆರದಲಿ ತೋರಿ ಬರುವುದು
ಹಲವು ಮಾತೇ ನೀ ಕಳೆದು ಬಾ ರಾಜನಾಗುತಲಿ

ನಿನಗೆ ನಮ್ಮಯ ಹರಕೆ ಸಲ್ಲುದು
ಕೊನೆಯ ಕಾಲಕೆ ಬಂದು ನೋಳ್ಪೆವು
ನಿನ್ನ ರಾಜ್ಯದ ಗಡಿಗೆ ಬರುವೆವು ಚಿಂತಿಸದಿರುವುದು
ಎನ್ನ ನಾಮವು ಬೇರೆಯಪ್ಪುದು
ನಿನ್ನ ಕಾಣುವ ಸಮಯಬರಲಿರೆ
ಇನ್ನು ನೀನೀಗ ಹೊರಡುವುದು ರಾಜ್ಯ ಹೊಂದಿರಲು

ಅಗಸಕೇಳ್ಕೆ ಮಾತದೊಂದಿಗೆ
ಈಗ ನಿನಗೆಲೆ ಮುಪ್ಪ ಕವಿದಿದೆ
ಮಗುಳಿ ಬರುವಾಜನುಮದಲ್ಲಿ ಯರಸನೆನಿಸುವುದು ನೀ
ಆಗ ಬಹುದೇನೆನುತ ಕೇಳಲು
ಅಗಸನೊಪ್ಪಿದ ಬಹಳ ಹರುಷದ
ಲಾಗುರುವು ನುಡಿದಿರಲು ತನ್ನ ಮನದಿಚ್ಛೆಯನಾಗ

ಅಗಸ ಪೋಪುದು ಬೇಗ ನೀನೈ
ಜಗವ ತೊರೆವುದು ಮರಳಿಪುಟ್ಟಲು
ಮುಗಿದು ಹೋಯಿತು ನಿನ್ನ ಬೊತ್ತದು ಈ ಜನುಮದೊಳಗೆ
ಜಗದಿ ಪುಟ್ಟುವೆ ಮರಳಿ ನೀನೈ
ಮಗನೆನಿಸಿ ರಾಜಗೆ ಧರೆ ಯೊಳಗೆ
ಭೋಗ ಸುಖಗಳ ಕಂಡುಬಾರ್ಯೆ ರಜಕರಾಜನೆ ನೀ

ತಾಮಸ ಗುಣದಲಿ ಬಯಸಿದೆ ನೀ
ನೀ ಮುಕುಟುವನು ಪುಟ್ಟುವೆಮ್ಲೇ
ಛ್ಛಮತದೊಳಗದು ಕಾರಣವೆನಲು ಜಗದೊಳಗೆ ನೀನು
ತಾಮಸ ಗುಣವ ಕಳೆದು ಬಂದಿರೆ
ನಮ್ಮದರುಶನ ನಿಮಗೆ ದೊರೆವುದು
ನಮ್ಮನರಸಿಂಹ ಸರಸತಿ ರೂಪವದು ಮೆರೆದಿರಲು

ಕೇಳುಕೇಳುತಲಗಸ ಮರುಗಿದ
ಹಾಳು ಮನದೀತಪ್ಪ ಮನ್ನಿಸಿ
ಬಾಳು ಬೆಳಗಿರಿ ಎನುತ ನಮಿಸಿದ ಪರಮಪದಕಾಗ
ಕೋಳ ಹಿಡಿದಿದೆ ಭವದಬಂಧದ
ಆಳವರಿಯದೆ ಮರೆತು ನಡೆದನು
ಆಳಿಕೊಳ್ಳುವ ಗನ್ನಮಹಿಮಾ ರಕ್ಷಿಸೆನ್ನನು ನೀ

ನಿಮ್ಮ ಕರುಣವು ತಪ್ಪಿ ಹೋಹುದೆ
ನಿಮ್ಮನಗಲುತ ಬದುಕ ಬಲ್ಲೆನೆ
ಅಮ್ಮನನ್ನುಳಿದು ಮಗುವು ಬದುಕಬಲ್ಲುದೆ ಸುಖದೊಳು
ಬೊಮ್ಮಮೂರುತಿ ಎಮ್ಮಕಾಯ್ವುದು
ನಮ್ಮ ತಪ್ಪನು ಮರೆತು ಮನ್ನಿಸಿ
ನಮ್ಮ ಶಿಶುವನು ಕಾಯ್ವ ತೆರದೊಳು ರಕ್ಷಿಸುವುದೆನ್ನ

ಪಟ್ಟ ಬೇಡವು ಪದವಿ ಬೇಡವು
ಕಟ್ಟಿ ಆಳುವ ರಾಜ್ಯ ಬೇಡವು
ಪಟ್ಟದಾನೆಯು ಛತ್ರ ಚಾಮರ ಗೊಡವೆನನಗೇಕೆ
ಉಟ್ಟ ವಸ್ತ್ರಗಳೊಗೆವ ರಜಕನ
ಪಟ್ಟ ಪದವಿಯೆ ಸಾಕು ಎನಗೆನೆ
ಅಟ್ಟ ಬೇಡಿರಿ ನಿಮ್ಮಸನಿಯದಿ ದೂರ ನಿರ್ದಯದಿ

ಎಂದು ಅಗಸನು ಕರವಜೋಡಿಸಿ
ನಿಂದು ಬೇಡುತ ಮೊರೆಯ ನಿಡುತಿರೆ
ಬಂಧು ಬಾಂಧವ ಇಂದಿರೇಶನು ನಸುನಗುತನುಡಿದ
ಚಂದದೊಳುನೀ ರಾಜ್ಯವಾಳುತ
ಬಂಧನಗಳನು ಕಳೆದು ಬಾರ್ಯೆ
ಚಂದದಿಂದಲೆ ನಿನಗೆ ಕರುಣೆದರುಶನ ದೊರಕುವುದು

ಅಗಸನಲ್ಲಿಯೆ ಬೀಳುಕೊಂಡರು
ಜಗದ ದೇವರು ಪಾದ ಮೂರುತಿ
ಅಗಸನಿಗೆ ತಾವಿತ್ತ ವರವನು ನಿಜವ ಮಾಡಿಸಲು
ಅಗಸ ಸತ್ತನು ಚಣದೊಳಾಗಲೆ
ಅಗಸ ದೇಹವ ಬಿಟ್ಟು ತೊರೆದನು
ರಾಗದೊಳು ಸಿಲುಕಿದಗಸನರಸನೆನಿಸಿ ಮೆರೆಯಲೆನೆ

ಗುರುವ ಮಾತಿ ನೊಳಗಸ ಮಡಿದನು
ಮರಳಿ ಪುಟ್ಟಿದ ರಾಜವಂಶದಿ
ಗುರುವು ಕರುಣಿಸೆ ಕಾಣದಾವುದು ಧರೆಯೊಳಗೆ ತಿಳಿಯೆ
ವರದ ಗುರು ಶ್ರೀಪಾದ ಯತಿಗಳು
ಮರುಳು ರಜಕನ ರಾಜನಾಗಿಸೆ
ವರವನಿತ್ತರು ಹಿಂದೆ ಚಣದಲಿ ಭಕ್ತಿಗೊಲಿಯುತಲಿ



ಸಂದರ್ಶಿಸಿ                                                                                ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ.ತಿ.ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ : ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ : ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ.

ವಿಗ್ರಹಗಳು : ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ.

ಆಳ್ವಾರ್‌ಗಳು : ವಿಶಿಷ್ಟಾದ್ವೈತ ತತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು : ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ : ಹರಿದಾಸರ ಹಿರಿಮೆಯನ್ನೂ ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ಆನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. ೯ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.

---

**ಕಾಲ : ಬೆಳಗ್ಗೆ ೮ ರಿಂದ** — **ಟಿಕೆಟ್ ರೂ. ೧--೦೦ (ಹಿರಿಯರಿಗೆ)**

**ರಾತ್ರಿ ೮ ರ ವರೆಗೆ** — **" " ೦--೫೦ (ಕಿರಿಯರಿಗೆ)**

# ಚೆಲುವ ಚೆನ್ನಕೇಶವರಾಯ

---ಶ್ರೀ ಚೆನ್ನಕೇಶವ.

ಪೂರ್ಣಾನಂದ ಮಹಾವಿಬೋಧ ಮಖಿಲಂ
ಸಂಭಾಸಯಂತಂ ರುಚಾ
ಸರ್ವತ್ರ ಪ್ರಭುಮೀಶ್ವರಂ ಗುಣನಿಧಿಂ
ದಿವ್ಯಾಕೃತಿಂ ಕೇಶವಂ

ಕಲ್ಯಾಣದ ಚಾಲುಕ್ಯರ ಆರನೇ ವಿಕ್ರಮಾದಿತ್ಯನ ಸೈನ್ಯ ಬಂದು ಬೀಡು ಬಿಟ್ಟಿತ್ತು. ಅದು ತನ್ನ ಹಿಂದಿನ ಶಿಬಿರದಲ್ಲಿ ಕಂಡ ಕಹಿಯನ್ನು ನೆನೆಸಿಕೊಂಡು ಸಂಕಟ ಪಡುತ್ತಿತ್ತು. ಯಾಕೆಂದರೆ ಅವರು ಇಳಿದುಕೊಂಡಿದ್ದ ಶಿಬಿರದ ಹತ್ತಿರವಿದ್ದ ಬಾವಿಗೆ ಯಾರೋ ವೈರಿಗಳು ವಿಷ ಬೆರೆಸಿದ್ದರು. ತಿಳಿಯದೇ ಕುಡಿದ ಇಬ್ಬರು ಸೈನಿಕರು ಮೃತರಾಗಿದ್ದರಿಂದ, ರಾತ್ರಿಯೇ ಅಲ್ಲಿಂದ ಹೊರಟು, ಪೂರ್ತಿ ರಾತ್ರಿ, ಒಂದು ಹಗಲು ಬಿಡದೇ ಪ್ರಯಾಣಮಾಡಿ ಮರುದಿನದ ರಾತ್ರಿ ಭೀಮಾನದಿಯ ದಡಕ್ಕೆಬಂದು ತಮ್ಮ ಶಿಬಿರದ ವಾಸ್ತವ್ಯಕ್ಕೆ ಸಿದ್ಧತೆ ನಡೆಸಿದ್ದರು. ಹಿಂದಿನ ದಿನ ನೀರಿಲ್ಲದೆ, ಊಟವನ್ನೂ ಕಾಣದೇ ಪ್ರಯಾಣ ಮಾಡಿದ್ದರಿಂದ ಎಲ್ಲ ಸೈನಿಕರೂ ನಿಸ್ಸತ್ವರಾಗಿದ್ದರು. ಇದನ್ನರಿತ ವಿಕ್ರಮಾದಿತ್ಯ ಅರಸನು ಮುಂದಾಲೋಚನೆಯಿಂದ ಮೊದಲು ಇವರೆಲ್ಲರ ಊಟೋಪಚಾರದ ವ್ಯವಸ್ಥೆ ನೋಡಬೇಕೆಂದು, ಸ್ವತಃ ತಾನೇ ವೇಷ ಮರೆಸಿಕೊಂಡು ಹತ್ತಿರದ ಗ್ರಾಮ ಪ್ರವೇಶ ಮಾಡಿದನು. ಆಗ ರಾತ್ರಿ ಸುಮಾರು ೧೨ ಗಂಟೆ.

ಕಿವಿ ಗಡಚಿಕ್ಕುವ ಸಪ್ಪಳದೊಂದಿಗೆ, ದೀವಟಿಗೆಯ ಬೆಳಕಿನಲ್ಲಿ ಒಂದು ದೊಡ್ಡ ಗುಂಪೇ ಹೊರಟಿದೆ. ಕೆಲವರು ಗಂಟೆ ಬಾರಿಸುತ್ತಿದ್ದರೆ, ಕೆಲವರು ಜಾಗಟೆ, ಕೊಂಬು, ಕಹಳೆ ಬಾರಿಸುತ್ತಿದ್ದಾರೆ. ಮುಂದೆ ಕೆಲವರು ವೇದ ಘೋಷ ಮಾಡುತ್ತಿದ್ದಾರೆ. ಒಂದು ಚಿಕ್ಕ ಸೈನ್ಯ ಹೊರಟಂತೆ ಹೊರಟಿದೆ. ಅದರಲ್ಲಿ ಸ್ತ್ರೀಯರು, ಪುರುಷರು, ಎಲ್ಲರೂ ಇದ್ದಾರೆ. ಎಲ್ಲ ಜಾತಿ ಮತ ಪಂಗಡಗಳೂ ಸೇರಿವೆ.

ಪಕ್ಕಕ್ಕೆ ಸರಿದುನಿಂತು ಅವರಿಗೆ ದಾರಿ ಮಾಡಿಕೊಟ್ಟ ವಿಕ್ರಮಾದಿತ್ಯನು ಹಿಂದಿನಿಂದ ಹೊರಟಿದ್ದ ಒಬ್ಬನನ್ನು ನಿಲ್ಲಿಸಿ ಕೇಳಿದ -- "ಏನಿದು? ಯಾಕೆ ಇಂಥ ಮಧ್ಯರಾತ್ರಿಯಲ್ಲಿ ಎಲ್ಲರೂ ಬಾರಿಸುತ್ತ ಹೊರಟಿದ್ದಾರೆ?" ಎಂದು ಕೇಳಲಾಗಿ ಆತ "ಅಯ್ಯೋ ಅಷ್ಟೂ ಗೊತ್ತಿಲ್ಲವೇ? ಇಂದು ಶ್ರೀಕೃಷ್ಣ ಜನ್ಮಾಷ್ಟಮಿ. ಈಗಷ್ಟೇ ಶ್ರೀಕೃಷ್ಣ ಜನಿಸಿದ್ದಾನೆ. ಅವರ ಸಂಭ್ರಮ ನಾವೆಲ್ಲ ಆಚರಿಸುತ್ತಿದ್ದೇವೆ. ನಾಳೆ ಬೆಳಿಗ್ಗೆ ಎಲ್ಲರಿಗೂ ಊಟದ ವ್ಯವಸ್ಥೆ ಇದೆ. ನೀನೂ ಬಾ" ಎಂದು ಹೇಳಿ ಹೊರಟನು. ಏನು ಮಾಡುತ್ತಾರೋ ನೋಡಬೇಕೆಂದು ಅವರನ್ನನುಸರಿಸಿ ವಿಕ್ರಮಾದಿತ್ಯನು ಹೊರಟನು. ಊರಲ್ಲೆಲ್ಲ ಸುತ್ತಿ ಗ್ರಾಮದ ಮಧ್ಯಭಾಗಕ್ಕೆ ಬಂದರು. ಅಲ್ಲಿ ಒಂದು ಚಿಕ್ಕ ಗುಡಿ ಇದೆ. ಸುತ್ತೆಲ್ಲ ಬಯಲು, ದಾಟಿ ಗ್ರಾಮ ಹಬ್ಬಿಕೊಂಡಿದೆ. ಅವರು ಏನು ಮಾಡುತ್ತಾರೆಂದು ನೋಡಿದರೆ, ಅವರೆಲ್ಲ ಭಜನೆ, ಕೀರ್ತನೆಗಳನ್ನು ಹಾಡುತ್ತ ಅಲ್ಲಿಯೇ ಕುಳಿತು ಬಿಟ್ಟರು. ಅರಸನು ನೇರವಾಗಿ ಅವರ ಮಧ್ಯಕ್ಕೆ ಹೋಗಿ ಗ್ರಾಮ ಮುಖಂಡನಾದ ಆದಿತ್ಯನಾಯಕನನ್ನು ಕಂಡು, ತನ್ನ ಪರಿಚಯ ಹೇಳಿಕೊಂಡು, ತಾನು ಸೈನ್ಯ ಸಮೇತ ಬೀಡಾರ ಮಾಡಿದ್ದಾಗಿಯೂ, ಹಿಂದಿನ ದಿನ ಊಟ -- ನೀರಿಲ್ಲದೇ ತಾವೆಲ್ಲ ಪ್ರಮಾಣ ಮಾಡಿದ ಪರಿಯನ್ನು ವಿವರಿಸಿ ನಾಳೆ ಬೆಳಿಗ್ಗೆ ತಮ್ಮೆಲ್ಲರಿಗೂ ಊಟದ ವ್ಯವಸ್ಥೆ ಮಾಡಿದರೆ ಅದರ ಖರ್ಚು ನೋಡಿಕೊಳ್ಳುವದಾಗಿ ಪ್ರಾರ್ಥಿಸಿ ತನ್ನ ಶಿಬಿರಕ್ಕೆ ಹಿಂತಿರುಗಿ ಬಂದು ವಿಶ್ರಮಿಸಿದನು.

ಮರುದಿನ ಬೆಳಗ್ಗೆ ಭೀಮಾನದಿಯಲ್ಲಿ ಎಲ್ಲರೂ ಸ್ನಾನಮಾಡುತ್ತಿರಲು, ಗ್ರಾಮಸ್ಥನೊಬ್ಬನು ಬಂದು "ಎಲ್ಲರೂ ಊಟಕ್ಕೆ ಬರಬೇಕೆಂದು" ಆಮಂತ್ರಿಸಿದನು. ಎಲ್ಲರೂ ಸ್ನಾನ ಮಾಡಿ ಊರಮಧ್ಯಕ್ಕೆ ಗುಡಿಯ ಹತ್ತಿರ ಬರುವಷ್ಟರಲ್ಲಿ ಎಲ್ಲರಿಗೂ ಎಲೆ ಹಾಕಿದ್ದರು. ಎಲ್ಲರಿಗೂ ಸಂತೃಪ್ತ ಪಕ್ವಾನ್ನ ಭೋಜನವಾಯಿತು. ಖರ್ಚು ವೆಚ್ಚವನ್ನು ಸ್ವೀಕರಿಸದೇ ಆದಿತ್ಯನಾಯಕನು "ತಾವು ನಮ್ಮ ಅತಿಥಿಯಾಗಿದ್ದೀರಿ ಮಾತ್ರವಲ್ಲ, ನಮ್ಮ ಪ್ರದೇಶದ ಅರಸರೂ ತಾವು. ತಮಗೆ ಊಟೋಪಚಾರ ಮಾಡುವುದು ನಮ್ಮ ಆದ್ಯ ಕರ್ತವ್ಯವೆಂದು" ಹೇಳಿ "ತಾವು ನಿನ್ನೆ ಉಪವಾಸ ಮಾಡಿ ಇಂದು ಪಾರಣೆ ಮಾಡಿದ್ದರಿಂದ ಶ್ರೀಕೃಷ್ಣ ಜನ್ಮಾಷ್ಟಮಿ ವ್ರತಪಾಲನೆ ಮಾಡಿದಂತಾಯಿತು. ಆದ್ದರಿಂದ ಶ್ರೀಕೃಷ್ಣನು ತಾವು ಹೊರಟ ಕಾರ್ಯದಲ್ಲಿ ಯಶಸ್ಸು ಸಂಪಾದಿಸಿ ಕೊಡುತ್ತಾ"ನೆಂದು ಹೇಳಿ ಅವರನ್ನು ಬೀಳ್ಕೊಟ್ಟನು.

ಧಾರ್ಮಿಕ ಮನೋಭಾವದ ಪಂಡಿತ ಮಣಿಗಳ ಪುರವೆಂಬ ಕಾರಣದಿಂದ ಪ್ರಸಿದ್ಧಿ ಪಡೆದ ಗ್ರಾಮವೇ ಮಣಿಪುರ -- ಮಣಿಯೂರು -- ಮಣ್ಣೂರು.

ರಾಷ್ಟ್ರಕೂಟರನ್ನು ಸೋಲಿಸಿ ಅಪಾರ ಸಂಪತ್ತಿನಿಂದ ಹಿಂತಿರುಗಿ ಬರುವಾಗ ವಿಕ್ರಮಾದಿತ್ಯನಿಗೆ ಮೊದಲಿನ ಘಟನೆ ನೆನಪಾಗಿ ಆ ಗ್ರಾಮಕ್ಕೆ ಬಂದು ಗ್ರಾಮಸ್ಥರನ್ನು ಕಂಡು, ಆ ಗ್ರಾಮದ ಮಧ್ಯದಲ್ಲಿದ್ದ ಚಿಕ್ಕದೇವಾಲಯದ ಸ್ಥಾನದಲ್ಲಿ ಭವ್ಯವಾದ ಶ್ರೀ ಚೆನ್ನಕೇಶವ ದೇವಸ್ಥಾನವನ್ನು ಶಿಲ್ಪಕಲಾಪ್ರೌಢಿಮೆಯಿಂದ ನಿರ್ಮಿಸಲು ಸಂಕಲ್ಪಿಸಿ, ಆಸ್ಥಾನದಿಂದ ಪ್ರಸಿದ್ಧ ಶಿಲ್ಪಿಗಳನ್ನು ಕರೆಸಿ ಕಾರ್ಯಪ್ರವೃತ್ತನಾದನು. ಬಾದಾಮಿ, ಕಾಂಚೀಪುರ ಮತ್ತು ಪೀಠಾಪುರಗಳಿಂದ ಕರೆಸಿದ್ದ ಪ್ರಸಿದ್ಧ ಶಿಲ್ಪ ಕಲಾ ಪಂಡಿತರು ಸತತವಾಗಿ ಐದು ವರ್ಷಗಳ ಕಾಲ ಶ್ರಮವಹಿಸಿ ನಿರ್ಮಿಸಿದ ಶ್ರೀ ಚೆನ್ನಕೇಶವ ದೇವಾಲಯವನ್ನು ನೋಡಲು ಎರಡು ಕಣ್ಣು ಸಾಲುತ್ತಿದ್ದಿಲ್ಲ. ಸುಮಾರು ಇನ್ನೂರಾ ಐವತ್ತು ವರ್ಷಗಳ ಪರ್ಯಂತ ವೈಭವದಿಂದ ಕಂಗೊಳಿಸಿದ ಚೆನ್ನಕೇಶವನಿಗೂ ಬಂದಿತು ಕುತ್ತು.

ಹಿಂದೂ ರಾಜ್ಯಗಳನ್ನೂ, ದೇವಾಲಯಗಳನ್ನೂ ನಾಶಮಾಡುತ್ತ ಬಂದ ಯವನಸೇನೆ ನಿಲಂಗಾದ ಬ್ರಹ್ಮದೇವಾಲಯ, ಜೇವರಗಿ ತಾಲೂಕು ಯಾತನೂರಿನ ಶ್ರೀರಂಗದೇವಾಲಯ, ಚಿತ್ತಾಪುರ ತಾಲೂಕು ಟೆಂಗಳಿಯ ಕೇಶವ ದೇವಾಲಯ, ಚೆಂಚೋಳಿಯ, ಕೇಶವ ದೇವಾಲಯಗಳನ್ನು ನೆಲಸಮಮಾಡಿದ್ದೇ, ವಿಗ್ರಹಗಳನ್ನೂ ಭಗ್ನಗೊಳಿಸುತ್ತ ನಡೆಯಿತು.

ಇದೇ ಸಮಯಕ್ಕೆ ಮಣ್ಣೂರಿನಲ್ಲಿ ಚಾತುರ್ಮಾಸಕ್ಕೆ ಕುಳಿತಿದ್ದ ಮಾಧವತೀರ್ಥರು ಅಪರೋಕ್ಷಜ್ಞಾನದಿಂದ ಈ ಎಲ್ಲ ಅನಾಹುತಗಳನ್ನು ಕಂಡುಕೊಂಡು ಗ್ರಾಮಸ್ಥರಿಗೆ ಸಲಹೆ ಕೊಟ್ಟು, ಒಂದು ಪಾಳು ಮನೆಯಲ್ಲಿ ಚೆನ್ನಕೇಶವ ಮೂರ್ತಿಯನ್ನು ಭೂವಾಸಕ್ಕೆ ಕಳಿಸಿದರು.

ಇದಾದ ಕೆಲವೇ ದಿನಗಳಲ್ಲಿ ಯವನ ಸೈನ್ಯ ಬಂದು ವಿಗ್ರಹವಿಲ್ಲದ ದೇವಸ್ಥಾನವನ್ನು ನೋಡಿ ಅದರ ಬದಿಯ ಗೋಡೆ ಮತ್ತು ಶಿಖರವನ್ನು ನಾಶಗೊಳಿಸಿ ತೆರಳಿತು.

ಮಂಕು ಕವಿದ ಮಣ್ಣೂರು ಒಂದು ಶತಮಾನ ಕಾಲ ಎಲೆ ಮರೆಯ ಕಾಯಾಗಿ ಯಾರ ಗಮನಕ್ಕೂ ಬಾರದೇ ಉಳಿದಿತ್ತು.

ಸುಮಾರು ಕ್ರಿ.ಶ. ೧೪೪೦ ರಲ್ಲಿ ಇದೇ ಮಣ್ಣೂರಿನಲ್ಲಿ ಉತ್ತರಾದಿ ಮಠದ ಪ್ರಾತಃಸ್ಮರಣೀಯರಾದ ಶ್ರೀ ವಿದ್ಯಾನಿಧಿ ತೀರ್ಥರು ಮಾರ್ಗಶೀರ್ಷ ಮಾಸದ ಪೌರ್ಣಿಮೆಯ ದಿನ ಶ್ರೀ ಕೇಶವನಿಗೆ ಮಠದ ಪ್ರತಿವರ್ಷದ ನಿಯಮದಂತೆ ಸಹಸ್ರ ಶಂಖಾಭಿಷೇಕ ಮಾಡಲು ಬಂದಿದ್ದಾಗ, ಕನಸಿನಲ್ಲಿ ಶ್ರೀ ಚೆನ್ನಕೇಶವನನ್ನು ಕಂಡು, ಮರುದಿನ ತಾವಿಳಿದುಕೊಂಡಿದ್ದ ಶೇಷಾದ್ರಿಯವರ ಮನೆಯಲ್ಲಿ ಪಡಸಾಲೆಯಲ್ಲಿ ಅಗೆಸಿದಾಗ, ಅಂದು ಭೂವಾಸಕ್ಕೆ ತೆರಳಿದ್ದ ಶ್ರೀ ಚೆನ್ನಕೇಶವನ ಸುಂದರ ವಿಗ್ರಹ ಗೋಚರಿಸಿತು. ಅದೇ ಮನೆಯ ದೇವರ ಕೋಣೆಯಲ್ಲಿ ವಿಗ್ರಹವನ್ನು ಪ್ರತಿಷ್ಠಾಪಿಸಿ, ವೈಭವದಿಂದ ಪಂಚಾಮೃತ ಅಭಿಷೇಕ ಮಾಡಿದರು. ಆ ಮನೆಯ, ಮನೆತನದ ಆರಾಧ್ಯದೈವನಾಗಿ ರೂಪುಗೊಂಡದ್ದರಿಂದ ಶೇಷಾದ್ರಿಗಳು ಆದ್ಯರಾಗಿ, ಉತ್ತರಾದಿ ಮಠದ ಪ್ರಥಮ ಶಿಷ್ಯತ್ವಕ್ಕೆ ಆದ್ಯತೆ ಪಡೆದು ಅಂದಿನಿಂದ ಆದ್ಯರೆಂದೇ ಅಭಿಧಾನವಾಗಿ ಮುಂದುವರೆದರು, ನೂರಾರು ವರ್ಷ ಮನೆಯ ದೇವರಾಗಿ ಪೂಜೆಗೊಂಡ ಶ್ರೀ ಚೆನ್ನಕೇಶವ ನಂತರ (ಅದೇ ಮನೆ) ಈಗಿನ ನೂತನ ದೇವಸ್ಥಾನದಲ್ಲಿ ಸಾರ್ವಜನಿಕರ ಆರಾಧ್ಯದೈವವಾಗಿ ಭಕ್ತರ ಅಭೀಷ್ಟಗಳನ್ನು ಪೂರೈಸುವ ಪರಮ ಪುರುಷೋತ್ತಮನಾಗಿ, ಶ್ರೇಷ್ಠವಾದ ಕಪ್ಪು ಶಿಲೆಯಲ್ಲಿ ಶಂಖ, ಚಕ್ರ, ಗದಾ, ಪದ್ಮಾಂಕಿತ ಚೆಲವ ಮೂರುತಿ, ಚೆಲುವ ಚೆನ್ನಕೇಶವರಾಯನಾಗಿ ಅಂದಿಗೂ ಇಂದಿಗೂ ಭಕ್ತರ ಮನ, ಮನೆಗಳಲ್ಲಿ ನೆಲೆಸಿದ್ದಾನೆ ಮತ್ತು ಪ್ರತಿವರ್ಷ ಮಾರ್ಗಶೀರ್ಷ ಪೌರ್ಣಿಮೆಯ ದಿನ ಕೇಶವ ಜಯಂತಿ ಉತ್ಸವವನ್ನು ಮಣ್ಣೂರಿನ ಇದೇ ದೇವಸ್ಥಾನದಲ್ಲಿ ಭಕ್ತಿಯಿಂದ, ವಿಜೃಂಭಣೆಯಿಂದ ಆಚರಿಸುತ್ತ ಬಂದಿದ್ದಾರೆ.

ವಿಷ್ಣು ಪುರಾಣದಲ್ಲಿ ಧ್ರುವನು ಮನದಲ್ಲಿ ಕಂಡು ಉಪಾಸನೆ ಮಾಡಿದ ಮೂರ್ತಿಯ ಪ್ರತಿ ರೂಪವಂತಿರುವುದರಿಂದ ಈ ಮೂರ್ತಿಗೆ ಯಾದವಾರ್ಯರು ತಮ್ಮ ಕರಾವಲಂಬನ ಸ್ತೋತ್ರದಲ್ಲಿ "ದೇವೇಶ ಮದ್ಗುರು ಕರಾರ್ಚಿತ ಪಾದ ಪದ್ಮ ಶ್ರೀ ಚೆನ್ನಕೇಶವ ಧ್ರುವ ವಿನಿರ್ಮಿತ ದಿವ್ಯ ಮೂರ್ತೇ" ಎಂದು ಸ್ತೋತ್ರ ಮಾಡಿದ್ದಾರೆ. ಅಂತಹ ಪರಮ ಮಂಗಳಪ್ರದ ಶ್ರೀ ಚೆನ್ನಕೇಶವನು ಎಲ್ಲರ ಸಂಚಿತಾರ್ಥ ಪಾಪಗಳನ್ನು, ಕಿಂಚಿತ್ತಾದ ಪೀಡೆಗಳನ್ನೂ ಕಳೆದು ಮುಂಚಿತಾಗಿ ಪಾದ ಪದ್ಮಗಳನ್ನು ತೋರಿ ಭವ ಬಂಧವನ್ನು ಬಿಡಿಸಿ ಚರಣಕಮಲದಲ್ಲಿ ಒಂದು ಮಂಬಿಯಾಗಿ ಮಾಡಿಕೊಳ್ಳಲೆಂದು ಪ್ರಾರ್ಥಿಸೋಣ.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

*ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.*

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ಶುಲ್ಕಸಹಿತ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ. 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಕುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

**ಪೇಪ್ಕಾರ್**

# ತಾರಕ ಸಂಹಾರಿ ಸುಬ್ರಹ್ಮಣ್ಯ

---'ಶಂಕರ್' ಸಾರಡ್ಕ.

ಸುಬ್ರಹ್ಮಣ್ಯ ಷಷ್ಠಿ ಅಥವಾ ಕುಕ್ಕೇ ಷಷ್ಠಿ, ಭಕ್ತ ಜನರು ಕುಮಾರಸುಬ್ರಹ್ಮಣ್ಯನನ್ನು ಭಕ್ತಿಯಿಂದ ಆರಾಧಿಸುವ ದಿನ. ವ್ರತ, ನಿಯಮ, ಉಪವಾಸಗಳನ್ನಾಚರಿಸಿ ಭಕ್ತಿಯಿಂದ ಕುಮಾರಸ್ವಾಮಿಯ ಸೇವೆಗೈಯುವ ದಿನ. ಅಸುರ ಶಕ್ತಿಯನ್ನು ತಾನು ಹುಟ್ಟಿದ ಏಳು ದಿನಗಳೊಳಗೆ ಸಂಹರಿಸಿ ಲೋಕೋದ್ಧಾರಗೈದ ಷಣ್ಮುಖ ವಿವಾಹವಾದ ದಿನ. ಕುಮಾರ ಸುಬ್ರಹ್ಮಣ್ಯ ತಾರಕನನ್ನು ವಧಿಸಿ ನೆಲೆಯಾಗಿ ನಿಂತ ಕುಮಾರಧಾರಾ ನದಿ ದಡದ ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ಈ ದಿನಗಳಲ್ಲಿ ವೈಭವದ ಆಚರಣೆಯಿದೆ. ಜೊತೆಗೆ ಸುಬ್ರಹ್ಮಣ್ಯನ ಗುಡಿ ಇರುವಲ್ಲೆಲ್ಲ ವಿಶೇಷ ಉತ್ಸವಗಳಿವೆ.

ಸುಬ್ರಹ್ಮಣ್ಯ ಗ್ರಾಮ ಮಲೆನಾಡಿನ ಗರ್ಭಸ್ಥಾನ ಎನ್ನಬಹುದು. ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲೂಕಿನ ಪೂರ್ವ ಭಾಗದಲ್ಲಿದೆ ಈ ಊರು. ಕೊಡಗು, ಹಾಸನ ಜಿಲ್ಲೆಗಳೊಂದಿಗೆ ಗಡಿಯನ್ನು ಹೊಂದಿದೆ. ಸುತ್ತಲೂ ತಲೆ ಎತ್ತಿ ನಿಂತಿರುವ ಸಹ್ಯಾದ್ರಿ ಬೆಟ್ಟಗಳ ನಿತ್ಯ ಹರಿದ್ವರ್ಣ ಕಾಡುಗಳು, ಕ್ಷೇತ್ರವನ್ನು ಬಳಸಿ ಹರಿಯುವ ಪುಣ್ಯನದಿ ಕುಮಾರಧಾರೆ ಸುಬ್ರಹ್ಮಣ್ಯ ನೆಲೆ ನಿಂತಿರುವ ಈ ಕ್ಷೇತ್ರಕ್ಕೆ ವಿಶೇಷ ಮೆರುಗನ್ನು ನೀಡಿದೆ.

ಈ ಕ್ಷೇತ್ರಕ್ಕೆ ಕುಕ್ಕೇ ಪಟ್ಟಣವೆಂಬ ಹೆಸರೂ ಇದೆ. ಕುಕ್ಷಿ ಎಂದರೆ ಗುಹೆ ಎಂದರ್ಥ. ಕುಕ್ಷಿ ಶಬ್ದದ ತದ್ಭವ ಕುಕ್ಕೆ. ವಾಸುಕಿಯ ಗುಹಾದ್ವಾರದಲ್ಲಿ ಸ್ಥಾಪಿಸಿದ ಲಿಂಗದ ಪ್ರಸಿದ್ಧಿಯಿಂದ ಕುಕ್ಕೇ ಸುಬ್ರಹ್ಮಣ್ಯವೆಂಬ ಪ್ರಸಿದ್ಧಿಯೂ ಈ ಸ್ಥಳಕ್ಕೆ ಬಂದಿತಂತೆ.

ಕುಮಾರ ಸುಬ್ರಹ್ಮಣ್ಯನು ಇಲ್ಲಿ ನೆಲೆನಿಂತ ಕತೆ ರೋಚಕವಾಗಿದೆ. ಕಶ್ಯಪನಿಗೆ ಅದಿತಿಯಲ್ಲಿ ಹುಟ್ಟಿದ ಮಗ ವಜ್ರಾಂಗ. ವಜ್ರಾಂಗ ತಪಸ್ಸು ಮಾಡುತ್ತಿದ್ದಾಗ ಅವನ ಪತ್ನಿ ವರಾಂಗಿಗೆ ಇಂದ್ರ ಕಿರುಕುಳ ನೀಡಲಾರಂಬಿಸಿದ. ಪ್ರತೀಕಾರವಾಗಿ ವಜ್ರಾಂಗ ತಾರಕನೆಂಬ ಮಗನನ್ನು ಪಡೆಯುವನು. ತಾರಕನು ಘೋರ ತಪಸ್ಸು ಮಾಡಿ ಶಿವನಿಂದ ಏಳು ದಿನಗಳ ಕೂಸಲ್ಲದೆ ಮತ್ತೆ ಯಾರಿಂದಲೂ ಸಾವು ಬರಬಾರದೆಂಬ ವರ ಪಡೆಯುತ್ತಾನೆ. ಮುಂದೆ ತಾರಕನು ದೇವತೆಗಳನ್ನೆಲ್ಲ ಹೊಡೆದೋಡಿಸಿ ದೇವೇಂದ್ರನ ಪದವಿಯನ್ನಾಕ್ರಮಿಸುವನು. ದೇವತೆಗಳೆಲ್ಲ ಬ್ರಹ್ಮನ ಮೊರೆ ಹೋಗುವರು. ಮನ್ಮಥನ ಸಹಾಯದಿಂದ ಹಿಮವಂತನ ಕುಮಾರಿಯಾದ ಪಾರ್ವತಿಯನ್ನು ಈಶ್ವರನು ವರಿಸುವಂತೆ ಮಾಡುತ್ತಾರೆ. ದೇವತೆಗಳು ನಂತರ ಅಗ್ನಿಯ ಸಹಾಯದಿಂದ ರುದ್ರ ವೀರ್ಯವನ್ನು ಸಂಗ್ರಹಿಸುವರು. ಅಗ್ನಿ ಮತ್ತು ಗಂಗೆಯ



ಸಹಾಯದಿಂದ ಹುಲ್ಲಿನ ಪೊದೆಯಲ್ಲಿ ಕುಮಾರನ ಜನನವಾಗುತ್ತದೆ. ಮಗು ರೋಧಿಸುತ್ತಿರಲು ಷಟ್ ಕೃತ್ತಿಕೆಗಳು ಬಂದು ಆ ಶಿಶುವಿಗೆ ಸ್ತನ್ಯವನ್ನು ಕುಡಿಸುವರು. ಆರು ಮುಖಗಳಿಂದ ಹಾಲನ್ನು ಕುಡಿದ ಮಗುವು ಷಣ್ಮುಖನೆಂಬ ನಾಮ ಧರಿಸಿತು.

ಈ ವಿಚಾರ ತಿಳಿದ ಈಶ್ವರ ಪಾರ್ವತಿಯರು ಬಂದು ಮಗುವನ್ನು ಕರೆದೊಯ್ದರು. ಕೌಮಾರಾವಸ್ಥೆಯಲ್ಲೇ ರಹಸ್ಯವಾಗಿ ಧನುರ್ವಿದ್ಯೆಯನ್ನು ಕಲಿತ ಮಗುವಿಗೆ ಪಾರ್ವತಿ ತನ್ನ ಶಕ್ತಿ ಆಯುಧವನ್ನು ಪ್ರದಾನ ಮಾಡಿದಳು. ತನ್ನ ಹುಟ್ಟಿನ ಉದ್ದೇಶ ತಿಳಿದ ಷಣ್ಮುಖ ತಾರಕನ ಸಂಹಾರಕ್ಕಾಗಿ ಮಹೀಸಾಗರ ಸಂಗಮಕ್ಕೆ ಬರುವನು. ಅಲ್ಲಿನ ಪರ್ವತ ಶಿಖರದಲ್ಲಿ ದೇವತೆಗಳು ಈತನಿಗೆ ಮಹೀತೀರ್ಥದಿಂದ ದೇವ ಸೇನಾಪತಿಯಾಗಿ ಪಟ್ಟಾಭಿಷೇಕ ಮಾಡುವರು. ವಿಷ್ಣುವಿನ ಸಲಹೆಯಂತೆ ಕುಮಾರಸ್ವಾಮಿಯು ತಾರಕನನ್ನು ಸಂಹರಿಸುವನು.

ಕಂಟಕನಾಗಿ ಬೆಳೆದ ತಾರಕನ ಸಂಹಾರದಿಂದ ದೇವತೆಗಳೆಲ್ಲ ಸಂತೋಷಗೊಳ್ಳುವರು. ಸಹ್ಯಾದ್ರಿಯಲ್ಲಿರುವ ಸಿದ್ಧರೂ, ಮಹರ್ಷಿಗಳೂ, ನಾಗ ಗಣಗಳೂ ಮತ್ತು ವಾಸುಕಿಯು ಕುಟುಂಬ ಸಮೇತರಾಗಿ ಬಂದು ಕುಮಾರನಿಗೆ ನಮಿಸುವರು. ಮಹೇಂದ್ರನು ತನ್ನ ಕುಮಾರಿಯಾದ ದೇವಸೇನೆಯನ್ನು ಕುಮಾರನು ವಿವಾಹವಾಗುವಂತೆ ಕೇಳಿಕೊಳ್ಳುತ್ತಾನೆ. ಕುಮಾರಧಾರಾ ನದಿಯ ದಡದಲ್ಲಿ ಸ್ವಾಮಿ ಕಾರ್ತೀಕ ನಗರವನ್ನು ನಿರ್ಮಿಸಿ ದೇವಸೇನಾ -- ಸುಬ್ರಹ್ಮಣ್ಯನ ವಿವಾಹವನ್ನು ದೇವೇಂದ್ರನು ನೆರವೇರಿಸುವನು. ಇದೇ ದಿನವನ್ನು ಚಂಪಾ ಷಷ್ಠಿಯೆಂದು ಭಕ್ತ ಜನರು ಆಚರಿಸಿಕೊಂಡು ಬಂದಿದ್ದಾರೆ.

ದೇವತೆಗಳ ಪ್ರಾರ್ಥನೆಯಂತೆ ಸುಬ್ರಹ್ಮಣ್ಯನು ತಾರಕನು ಮಡಿದ ಸ್ಥಳದಲ್ಲಿ ಸ್ತಂಭೇಶ್ವರನನ್ನು ಪ್ರತಿಷ್ಠಿಸಿದನು. ತಮ್ಮ ಅಭೀಷ್ಟ ಈ ಕ್ಷೇತ್ರದಲ್ಲಿ ಸಿದ್ಧಿಯಾದುದರಿಂದ ಸಮಸ್ತ ದೇವತೆಗಳು ಸೇರಿ ಇಲ್ಲಿ ಸಿದ್ಧೇಶ್ವರನನ್ನು ಸ್ಥಾಪಿಸಿದರು. ಕುಮಾರಸ್ವಾಮಿ -- ದೇವಸೇನೆಯು ಈ ಕ್ಷೇತ್ರದಲ್ಲಿ ವಾಸುಕಿಯೊಂದಿಗೆ ವಾಸಿಸತೊಡಗಿದರು. ಪುತ್ರ ವಾತ್ಸಲ್ಯದಿಂದ ಶಿವ ಪಾರ್ವತಿಯರೂ ಇಲ್ಲಿ ನೆಲೆಸಲು ಈ ಕ್ಷೇತ್ರ ಕುಕ್ಕೆ ಲಿಂಗವೆಂಬ ಖ್ಯಾತಿ ಪಡೆಯಿತು ಎಂಬುದು ಕ್ಷೇತ್ರ ಚರಿತ್ರೆ ತಿಳಿಸುತ್ತದೆ. ಗಣಪತಿಯೂ ಇಲ್ಲಿ ಬಂದು ನೆಲೆಸ ತೊಡಗಿದನು. ಇದರಿಂದಾಗಿ ಈ ಸ್ಥಾನದ ಮಹಿಮೆ ಇನ್ನೂ ಹೆಚ್ಚಿತು.

ಆದಿ ಸುಬ್ರಹ್ಮಣ್ಯ ಕುಮಾರಸ್ವಾಮಿಯ ದೇವಾಲಯದಿಂದ ೧೦೦ ಮೀ. ದಕ್ಷಿಣಕ್ಕೆ ಇದೆ. ದರ್ಪಣ ತೀರ್ಥದ ಪಕ್ಕದಲ್ಲಿ ಈ ಗುಡಿಯ ಗರ್ಭ ಗೃಹದೊಳಗೆ ದೊಡ್ಡ ವಾಲ್ಮೀಕಿ ಹುತ್ತವು ಗೋಚರಿಸುತ್ತದೆ. ಇಲ್ಲಿ ನಿತ್ಯ ಪೂಜೆ, ನಂದಾದೀಪ, ನೈವೇದ್ಯಾದಿಗಳು ನಡೆಯುತ್ತವೆ. ಬ್ರಹ್ಮನಿಂದ ಪ್ರತಿಷ್ಠಿತವಾದ ಶಿವಲಿಂಗವೂ ಇಲ್ಲಿದೆ. ಸುಬ್ರಹ್ಮಣ್ಯ ಕ್ಷೇತ್ರಕ್ಕೆ ಬಂದ ಭಕ್ತಾದಿಗಳು ಇಲ್ಲಿನ ದರ್ಶನ ಲಾಭವಿಲ್ಲದೆ ಹೋದರೆ ಅವರಿಗೆ ಯಾತ್ರಾ ಫಲ ದೊರೆಯದೆಂಬ ಶಾಪವಿದೆ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದಿಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ. 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ. 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

ಈ ಕ್ಷೇತ್ರದಲ್ಲಿ ಹರಿಯುವ ಕುಮಾರಧಾರಾ ನದಿ ಒಂದು ಪುಣ್ಯತೀರ್ಥ. ಕೃತ ಯುಗದಲ್ಲಿ ಇಂದ್ರದ್ಯುಮ್ನನೆಂಬ ರಾಜನು ಭಕ್ತಿಯಿಂದ ಭೂಮಿಯ ಮೇಲೆ ಯಜ್ಞ ಮಾಡುತ್ತಿರಲು ಭೂವೇವಿಯು ಸಂತೃಪ್ತಳಾಗಿ, ಭೂಗರ್ಭದಿಂದ ಉಕ್ಕಿ ಪ್ರವಹಿಸಿದ ಸಮಸ್ತ ತೀರ್ಥಗಳ ಸಾರವೇ ಈ ನದಿ. ಪೂರ್ವದಲ್ಲಿ ಮಹೀನದಿ -- ಎಂದೂ, ತರುವಾಯ ಧಾರಾನದಿಯೆಂದೂ, ಕುಮಾರಸ್ವಾಮಿಗೆ ತೀರ್ಥಾಭಿಷೇಕವಾದ ನಂತರ ಕುಮಾರಧಾರಾ ನದಿಯೆಂದೂ ಖ್ಯಾತವಾಯಿತು. ಚರ್ಮವ್ಯಾಧಿಗಳು ಈ ತೀರ್ಥ ಸ್ನಾನದಿಂದ ಪರಿಹಾರವಾಗುತ್ತವೆ; ಶ್ರಾವಣ ಮಾಸದ ಅಮವಾಸ್ಯೆ ಮತ್ತು ಸಂಕ್ರಾಂತಿಯಂದು ಈ ತೀರ್ಥಸ್ನಾನ ಅತ್ಯಂತ ಪುಣ್ಯ ಫಲಪ್ರದವೆಂಬ ನಂಬಿಕೆ ಜನರಲ್ಲಿ ಬೆಳೆದು ಬಂದಿದೆ. ದರ್ಪಣ ತೀರ್ಥ ಮತ್ತು ಮತ್ಸ್ಯ ತೀರ್ಥ --ಇವುಗಳು ಇಲ್ಲಿನ ಇತರ ಪುಣ್ಯತೀರ್ಥಗಳು. ಬಿಲದ್ವಾರ ಇಲ್ಲಿನ ಇನ್ನೊಂದು ಪವಿತ್ರ ಸ್ಥಾನ. ದೇವಸ್ಥಾನದಿಂದ ಅರ್ಧ ಕಿ.ಮೀ. ದಕ್ಷಿಣಕ್ಕೆ ಈ ಬಿಲದ್ವಾರ ಕಾಣಿಸುತ್ತದೆ. ಪೂರ್ವಕಾಲದಲ್ಲಿ ವಾಸುಕಿಯು ಗರುಡನ ಬಾಧೆ ತಾಳಲಾರದೆ ಈ ಗುಹೆಯಲ್ಲಿ ವಾಸವಾಗಿದ್ದನು ಎಂದು ಪ್ರತೀತಿ.

ಈ ವರ್ಷದ ಷಷ್ಠಿ ಉತ್ಸವವು ಡಿಸೆಂಬರ್ ೧೨ ರಂದು ನಡೆಯಲಿದೆ. ಪ್ರತಿವರ್ಷ ವರ್ಷಾವಧಿ ಮಹೋತ್ಸವವು ಕಾರ್ತೀಕ ಮಾಸದ ದ್ವಾದಶಿಯಂದು ಆರಂಭವಾಗಿ ಮಾರ್ಗಶಿರ ಪೌರ್ಣಮಿಯನ್ನು ಅಂತ್ಯಗೊಳ್ಳುತ್ತದೆ. ಕಾರ್ತೀಕ ಅಮವಾಸ್ಯೆಯಂದು ಲಕ್ಷದೀಪೋತ್ಸವ. ನಂತರ ಪಾಡ್ಯ, ಬಿದಿಗೆ, ತದಿಗೆ, ಚೌತಿಯಂದು ಕ್ರಮವಾಗಿ ಚಂದ್ರಮಂಡಲೋತ್ಸವ, ಅಶ್ವವಾಹನೋತ್ಸವ, ಮಯೂರವಾಹನೋತ್ಸವ, ಹೂವಿನ ತೇರಿನೋತ್ಸವ. ಷಷ್ಠಿ ದಿನ ಪೂರ್ವಾಹ್ನ ಕಾಲದ ಸುಮುಹೂರ್ತದಲ್ಲಿ ಶ್ರೀ ಸುಬ್ರಹ್ಮಣ್ಯ ಸ್ವಾಮಿ ಮತ್ತು ಉಮಾಮಹೇಶ್ವರರ ಸಮೇತವಾಗಿ ರಥೋತ್ಸವ. ಗರುಡ ದರ್ಶನವಿಲ್ಲದ ಈ ಕ್ಷೇತ್ರಕ್ಕೆ ಅಂದು ಗರುಡದರ್ಶನವೀಯುವುದು ಈ ಕ್ಷೇತ್ರದ ಮಹಿಮೆ. ರಥ ಎಳೆಯಲು ಉಪಯೋಗಿಸಿದ ಬೆತ್ತ ತುಂಡರಿಸಿ ಭಕ್ತರಿಗೆ ಹಂಚಲ್ಪಡುತ್ತದೆ. ವಿಷ ಬಾಧೆಗೆ ಇದು ಮಹಾ ಔಷಧವೆಂಬ ನಂಬಿಕೆಯಿದೆ.

ಸಂತಾನ ಪ್ರಾಪ್ತಿ, ನಾಗದೋಷ ಮತ್ತು ರೋಗ ನಿವಾರಣೆ, ಶಕ್ತಿ, ಜ್ಞಾನವೃದ್ಧಿಗಾಗಿ ಭಕ್ತರು ಈ ಕ್ಷೇತ್ರಕ್ಕೆ ಭೇಟಿ ನೀಡುತ್ತಾರೆ. ಯಾತ್ರಿಕರ ತೊಂದರೆಗಳನ್ನು ನಿವಾರಿಸಲು ದೇವಸ್ಥಾನದ ಆಡಳಿತ ವ್ಯಾಪಕವಾದ ಕ್ರಮಗಳನ್ನು ಕೈಗೊಂಡಿದೆ. ✪

# ಕನಕ ಕೀರ್ತನ

## ಏನೆಂದು ಕೊಂಡಾಡಿ ತುತಿಸಲೋ ದೇವ

ರಾಗ -- ಕಲ್ಯಾಣಿ ತಾಳ -- ಝಂಪೆ

ಏನೆಂದು ಕೊಂಡಾಡಿ ತುತಿಸಲೋ ದೇವ
ನಾನೇನು ಬಲ್ಲೆ ನಿನ್ನಯ ಮಹಿಮೆ ಘನವ || ಪ ||

ಹರಿಮುಕುಂದನು ನೀನು ನರಜನ್ಮಪಶು ನಾನು
ಪರಮಾತ್ಮನು ನೀನು ಪಾಮರನು ನಾನು
ಗರುಡಗಮನನು ನೀನು ಮರುಳುಪಾಪಿಯು ನಾನು
ಪರಂಜ್ಯೋತಿಯು ನೀನು ತಿರುಕನು ನಾನು || ೧ ||

ವಾರಿಧಿಶಯನನಾದ ಕಾರುಣ್ಯಪತಿ ನೀನು
ಘೋರದಿಂದಿಹ ಕಾಮಿ ಕ್ರೋಧಿ ನಾನು
ಈರೇಳು ಭುವನದೊಳು ಇರುವ ಮೂರುತಿ ನೀನು
ಮೂರಿ ನಿಮ್ಮನು ಬೈವ ದುಷ್ಟ ನಾನು || ೨ ||

ಅಣು ರೇಣು ತೃಣಗಳಲಿ ಪರಿಪೂರ್ಣನು ನೀನು
ಕ್ಷಣ ಕ್ಷಣಕೆ ಅವಗುಣ ಕುಕರ್ಮಿ ನಾನು
ವಾಣಿಯರಸನ ಹೆತ್ತ ವೈಕುಂಠಪತಿ ನೀನು
ತನು ನಿತ್ಯವಲ್ಲದ ಗೊಂಬೆ ನಾನು || ೩ ||

ಕಂಬದಲಿ ಬಂದ ಆನಂದ ಮೂರುತಿ ನೀನು
ನಂಬಿಕಿಲ್ಲದ ಪ್ರಪಂಚಿಗನು ನಾನು
ಅಂಬರೀಷಗೆ ಒಲಿದ ಅಕ್ರೂರ ಸಖ ನೀನು
ಡಂಭ ಕರ್ಮಿಯು ನಾನು ನಿರ್ಜಿತನು ನೀನು || ೪ ||

ತಿರುಪತಿಯ ವಾಸ ಶ್ರೀ ವೆಂಕಟೇಶನು ನೀನು
ಸ್ಮರಿಸಿ ನಿಮ್ಮಯ ನಾಮ ಬದುಕುವವ ನಾನು
ಬಿರುದುಳ್ಳವನು ನೀನು ಮೊರೆಹೊಕ್ಕವನು ನಾನು
ಸಿರಿಕಾಗಿನೆಲೆಯಾದಿ ಕೇಶವನು ನೀನು || ೫ ||

> ಕನಕದಾಸರು ಕನ್ನಡ ಸಾಹಿತ್ಯದಲ್ಲಿ -- ಹರಿದಾಸ ಸಾಹಿತ್ಯದಲ್ಲಿ ಒಂದು ಅತ್ಯುತ್ತುಂಗ ಸ್ಥಾನ ಪಡೆದವರು. ಪುರಂದರ ದಾಸರ ಸ್ನೇಹಿತರಾಗಿ, ವ್ಯಾಸರಾಯರ ಶಿಷ್ಯರಾಗಿ ಅವರ ಜೀವನ ಅರಳಿದ್ದು ಕನ್ನಡಿಗರ ಭಾಗ್ಯವೆನ್ನಬೇಕು. ಅವರಿಗೆ ಹರಿಭಕ್ತಿಸಾರ,ರಾಮಧಾನ್ಯಚರಿತೆ, ನಳಚರಿತೆ, ಮೋಹನ ತರಂಗಿಣಿಗಳನ್ನು ಬರೆಯುವ ಸುದೀರ್ಘ ಸಹನೆ ಪ್ರತಿಭೆಗಳೊಡನೆ ಹರಿಕೀರ್ತನೆಯಲ್ಲಿ ಆನಂದಿಸುವ ಮನವೂ ಅಪಾರ. ಬೇರೆ ಬೇರೆ ಪರಿಸರ ಪ್ರಭಾವಗಳಲ್ಲಿ ಬೆಳೆದ ಅವರು ಅವೆಲ್ಲವುಗಳಲ್ಲಿನ ಒಳಿತನ್ನು ಆಯ್ದು ಅನುಭವಿಸಿ ಅರ್ಥವತ್ತಾಗಿ ವಿವರಿಸಿವರು. ಅವನ್ನೇ ಕೀರ್ತನೆಗಳಲ್ಲಿ ನಾವು ಕಾಣಬಹುದಾಗಿದೆ. ಕನಕದಾಸರ ಜಯಂತಿಯ ನಿಮಿತ್ತವಾಗಿ ಅವರ ಕೃತಿಗಳಲ್ಲಿ ಹಲವನ್ನು ಇಲ್ಲಿ ಸಾದರ ಪಡಿಸಲಾಗಿದೆ.
>
> * * *

## ಈತನೀಗ ವಾಸುದೇವನು

ರಾಗ -- ಭೈರವಿ ತಾಳ -- ರೂಪಕ

ಈತನೀಗ ವಾಸುದೇವನು ಲೋಕದೊಡೆಯ || ಪ ||

ದಾಸಗೊಲಿದು ತೇರನೇರಿ ತೇಜಿ ಹಿಡಿದು ನಡೆಸಿದಾತ || ಅ.ಪ ||

ದನುಜೆಯಾಳ್ದನಣ್ಣನಯ್ಯನ ಪಿತನ ಮುಂದೆ ಕೌರವೇಂದ್ರ
ನನುಜೆಯಾಳಿದವನ ಶಿರವ ಕತ್ತರಿಸುತ
ಅನುಜೆಯಾಳಿದವನ ಬೆಂಕಿ ಮುಟ್ಟದಂತೆ ಕಾಯ್ದ ರುಕ್ಮ
ನನುಜೆಯಾಳಿದವನ ಮೂರ್ತಿಯನ್ನು ನೋಡಿರೋ || ೧ ||

ನರನ ಸುತಸರಣ್ಯದಲ್ಲಿ ಗಿರಿಯೊಳ್ನಿಂತು ತನ್ನ ರೋಪದಿ
ಶರಗಳನ್ನು ತೀಟುತಿಪ್ಪನ ಯೋಚಿಸಿ
ಭರದಲವನ ಕರೆದು ಕುರುಪು ತೋರಿ ಪತ್ರವನ್ನು ಹಾರಿಸಿದವನ
ಶಿರವನ್ನು ಭೇದಿಸಿದ ದೇವ ಕಾಣಿರೋ || ೨ ||

ಸೃಷ್ಟಿಕರ್ತಗೆ ಮಗನಾದವನಿಗಿಷ್ಟ ಭೂಷಣ ಅಶನವಾದವನ
ಜ್ಯೇಷ್ಠಪುತ್ರಗೆ ವೈರಿ ತೊಡೆಯ ಭೇದಿಸೆಂದು ಬೋಧಿಸಿ
ಕಷ್ಟವನ್ನು ಕಳೆದು ಭಕ್ತರಿಷ್ಟವನ್ನು ಕಾಮ ಉ
ತ್ಕೃಷ್ಟ ಮಹಿಮನಾದ ದೇವ ಕಾಣಿರೋ || ೩ ||

ಕ್ರೂರನಾದ ಫಣಿಪ ಬಾಣ ತರಣಿಜನು ನಿರೀಕ್ಷಿಸ್ಯಾಗ
ವೀರನೆಚ್ಚಯೆಸುಗೆ ಬಪ್ಪುದನ್ನು ಈಕ್ಷಿಸಿ
ಧಾರಿಣಿಯ ಪದದೊಳೌಂಕಿ ಚರಣಭಜಕ ನರನ ಕಾಯ್ದ
ಭಾರಕರ್ತನಾದ ದೇವನೀತ ಕಾಣಿರೋ || ೪ ||

ವ್ಯೋಮ ಕೇಶನಿಪ್ಪದೆಸೆಯ ಆ ಮಹಾಮಹಿಮೆಯುಳ್ಳ
ಸಾಮಜವನೇರಿ ಬರುವ ಶಕ್ತಿಯನೀಕ್ಷಿಸಿ
ಪ್ರೇಮದಿಂದ ಉರವನೊಡ್ಡಿ ಡಿಂಗರಿಗನ ಕಾಯ್ದ ಸಾರ್ವ
ಭೌಮ ಬಾಡದಾದಿ ಕೇಶವನ್ನ ನೋಡಿರೋ || ೫ ||

## ಅಡಿಗೆಯ ಮಾಡಬೇಕಣ್ಣ

ರಾಗ -- ಪಂತುವರಾಳಿ ತಾಳ -- ಛಾಪು

ಅಡಿಗೆಯನು ಮಾಡಬೇಕಣ್ಣ ನಾನೀಗ ಸುಜ್ಞಾನ
ಅಡಿಗೆಯನು ಮಾಡಬೇಕಣ್ಣ || ಪ ||

ಅಡಿಗೆಯನು ಮಾಡಬೇಕು ಮಡಿಸಬೇಕು ಮದಗಳನ್ನು
ಒಡೆಯನಾಜ್ಞೆಯಿಂದ ಒಳ್ಳೆ ಸಡಗರದಿ ಈ ಮನೆಯ ಸಾರಿಸಿ || ಅ.ಪ ||

ತನ್ನ ಗುರುವನ್ನು ನೆನೆಯಬೇಕಣ್ಣ ತನುಭಾವವೆಂಬ
ಭಿನ್ನ ಕಲ್ಮಶವಳಿಯಬೇಕಣ್ಣ



ಒನಕೆಯಿಂದ ಕುಟ್ಟಿ ಕೇರಿ ತನಗೆ ತಾನೆ ಆದ ಕಜ್ಜ
ಸನುವರಿತು ಇಕ್ಕದೇಕು ಅರಿವರ್ಗವೆಂಬ ತುಂಟರಳಿಸಿ || ೧ ||

ತತ್ವಭಾಂಡವ ತೊಳೆಯದೇಕಣ್ಣ ಸತ್ಯಾತ್ಮನಾಗಿ
ಅರ್ತಿ ಅಕ್ಕಿಯ ಮಥಿಸದೇಕಣ್ಣ
ಕತ್ತರಿ ಮನವೆಂಬ ಹೊಟ್ಟನ್ನು ಎತ್ತಿ ಒಲೆಗೆ ಹಾಕಿ ಇನ್ನು
ಹೊತ್ತಿಕೊಂಡಿಪ ಮಮತೆಯನ್ನು ಎತ್ತಿ ಹೆಸರ ಹಿಂಗಿಸುತಲಿ || ೨ ||

ಜನನ ಸೊಂಡಿಗೆ ಹುರಿಯದೇಕಣ್ಣ ನಿಜವಾಗಿ ನಿಂತು
ತನುವು ತುಪ್ಪವ ಕಾಸದೇಕಣ್ಣ
ಕನಕಗಿರಿ ನೆಲೆಯಾದಿ ಕೇಶವವಾಸ
ಕನಕನ ಕಟ್ಟಳೆಯೊಳು ನಿಂತು ಸುಖದ ಪಾಕವನು
ಚಂದದಿಂ ಸವಿಮಣ್ಣಲಿಕ್ಕೆ || ೩ ||

# ಈಶ ನಿನ್ನ ಚರಣ ಭಜನೆ

ರಾಗ -- ಕಲ್ಯಾಣಿ ತಾಳ -- ಆದಿ

ಈಶ ನಿನ್ನ ಚರಣ ಭಜನೆ ಆಸೆಯಿಂದ ಮಾಡುವೆನು || ಪ ||

ದೋಷ ರಾಶಿ ನಾಶ ಮಾಡು ಶ್ರೀಶ ಕೇಶವ || ಅ.ಪ ||

ಶರಣು ಹೊಕ್ಕೆನಯ್ಯ ಎನ್ನ ಮರಣ ಸಮಯದಲ್ಲಿ ನಿನ್ನ
ಚರಣಸ್ಮರಣೆ ಕರುಣಿಸಯ್ಯ ನಾರಾಯಣ || ೧ ||

ಶೋಧಿಸೆನ್ನ ಭವದ ಕಲುಷ ಬೋಧಿಸಯ್ಯ ಜ್ಞಾನ ಎನಗೆ
ಬಾಧಿಸುವ ಯಮನ ಬಾಧೆ ಬಿಡಿಸು ಮಾಧವ || ೨ ||

ಹಿಂದನೇಕ ಯೋನಿಗಳಲಿ ಬಂದು ಬಂದು ನೊಂದೆ ನಾನು
ಇಂದು ಭವದ ಬಂಧ ಬಿಡಿಸು ತಂದೆ ಗೋವಿಂದ || ೩ ||

ಭ್ರಷ್ಟನೆನಿಸದೇಡ ಕೃಷ್ಣ ಇಷ್ಟು ಮಾತ್ರ ಬೇಡಿಕೊಂಬೆ
ಶಿಷ್ಟರೊಳಗೆ ಇಟ್ಟು ಕಷ್ಟ ಬಿಡಿಸು ವಿಷ್ಣುವೆ || ೪ ||

ಮೊದಲು ನಿನ್ನ ಪಾದ ಪೂಜೆ ಮುದದಿ ಮಾಡುವೆನು ನಾನು
ಹೃದಯದೊಳಗೆ ಒದಗಿಸಯ್ಯ ಮಧುಸೂದನ || ೫ ||

ಕವಿದುಕೊಂಡು ಇರುವ ಪಾಪ ಸವೆದುಹೋಗುವಂತೆ ಮಾಡಿ
ಜವನ ಬಾಧೆಯನ್ನು ಬಿಡಿಸೊ ತ್ರಿವಿಕ್ರಮ || ೬ ||

ಕಾಮಜನಕ ನಿನ್ನ ನಾಮ ಪ್ರೇಮದಿಂದ ಪಾಡುವಂಥ
ನೇಮ ಎನಗೆ ಪಾಲಿಸಯ್ಯ ಸ್ವಾಮಿ ವಾಮನ || ೭ ||

ಮದನನಯ್ಯ ನಿನ್ನ ಮಹಿಮೆ ವದನದಲ್ಲಿ ಇರುವಂತೆ
ಹೃದಯದಲ್ಲಿ ಸದನ ಮಾಡು ಮುದದಿ ಶ್ರೀಧರ || ೮ ||

ಹುಸಿಯನಾಡಿ ಹೊಟ್ಟೆ ಹೊರೆವೆ ವಿಷಯದಲ್ಲಿ ರಸಿಕನೆಂದು
ಹುಸಿಗೆ ಹಾಕದಿರಯ್ಯ ಹೃಷಿಕೇಶನೆ || ೯ ||

ಬಿದ್ದು ಭವದನೇಕ ಜನುಮ ಬದ್ಧನಾಗಿ ಕಲುಷದಿಂದ
ಗೆದ್ದು ಪೋಪ ಬುದ್ಧಿ ತೋರೊ ಪದ್ಮನಾಭನೆ || ೧೦ ||

ಕಾಮಕ್ರೋಧ ಬಿಡಿಸಿ ನಿನ್ನ ನಾಮ ಜಿಹ್ವೆಯೊಳಗೆ ನುಡಿಸು
ಶ್ರೀ ಮಹಾನುಭಾವನಾದ ದಾಮೋದರ || ೧೧ ||

ಪಂಕಜಾಕ್ಷ ನೀನು ಎನ್ನ ಮಂಕುಬುದ್ಧಿ ಬಿಡಿಸಿ ನಿನ್ನ
ಕಿಂಕರನ ಮಾಡಿಕೊಳ್ಳೊ ಸಂಕರುಷಣ || ೧೨ ||

ಏಸು ಜನ್ಮಬಂದರೇನು ದಾಸನಲ್ಲವೇನೊ ನಾನು
ಘಾಸಿ ಮಾಡದಿರು ಎನ್ನ ವಾಸುದೇವನ || ೧೩ ||

ಬುದ್ಧಿಶೂನ್ಯನಾದ ಎನ್ನಪದ್ಧಕಾರ್ಯ ಕುಹಕ ಮನವ
ತಿದ್ದಿ ಹೃದಯ ಶುದ್ಧಿ ಮಾಡೋ ಪ್ರದ್ಯುಮ್ನನೆ || ೧೪ ||

ಜನನಿ ಜನಕ ನೀನೆ ಎಂದು ಎನುವೆನಯ್ಯ ದೀನಬಂಧು
ಎನಗೆ ಮುಕ್ತಿ ಪಾಲಿಸಿಂದು ಅನಿರುದ್ಧನೆ || ೧೫ ||

ಹರುಷದಿಂದ ನಿನ್ನ ನಾಮ ಸ್ಮರಿಸುವಂತೆ ಮಾಡು ಪ್ರೇಮ
ಇರಿಸುವರಣದಲ್ಲಿ ಕ್ಷೇಮ ಪುರುಷೋತ್ತಮ || ೧೬ ||

ಸಾಧುಸಂಗ ಕೊಟ್ಟು ನಿನ್ನ ಪಾದಭಜನೆ ಇತ್ತು ಎನ್ನ
ಭೇದಮಾಡಿ ನೋಡದಿರು ಅಧೋಕ್ಷಜ || ೧೭ ||

ಚಾರುಚರಣತೋರಿ ಎನಗೆ ಪಾರುಗಾಣಿಸಯ್ಯ ಕೊನೆಗೆ
ಭಾರಹಾಕಿರುವೆ ನಿನಗೆ ನಾರಸಿಂಹನ || ೧೮ ||

ಸಂಚಿತಾರ್ಥ ಪಾಪಗಳು ಕಿಂಚಿತಾವ ಪೀಡೆಗಳು
ಮುಂಚಿತಾಗಿ ಕಳೆದು ಪೊರೆಯೊ ಸ್ವಾಮಿ ಅಚ್ಯುತ || ೧೯ ||

ಜ್ಞಾನಭಕ್ತಿ ಕೊಟ್ಟು ನಿನ್ನ ಧ್ಯಾನದಲ್ಲಿ ಇಟ್ಟು ಸದಾ
ಹೀನ ಬುದ್ಧಿ ಬಿಡಿಸು ಮುನ್ನ ಜನಾರ್ದನ || ೨೦ ||

ಜಪತಪಾನುಷ್ಠಾನವಿಲ್ಲದೆ ಕುಪಥಗಾಮಿಯಾವ ಎನ್ನ
ಕೃಪೆಯ ಮಾಡಿ ಕ್ಷಮಿಸಬೇಕು ಉಪೇಂದ್ರನೇ || ೨೧ ||

ಮೊರೆಯ ಇಡುವೆನಯ್ಯ ನಿನಗೆ ಶರಧಿಶಯನ ಶುಭಮತಿಯ
ಇರಿಸೊ ಭಕ್ತನೆಂದು ಪರಮ ಪುರುಷ ಶ್ರೀಹರೇ || ೨೨ ||

ಪುಟ್ಟಿಸಲು ಬೇಡ ಇನ್ನು ಪುಟ್ಟಿಸಿದಕ್ಕೆ ಪಾಲಿಸಿನ್ನು
ಇಷ್ಟು ಬೇಡಿಕೊಂಡೆ ನಾನು ಶ್ರೀಕೃಷ್ಣನೆ || ೨೩ ||

ಸತ್ಯವಾದ ನಾಮಗಳನು ನಿತ್ಯದಲ್ಲಿ ಪಠಿಸುವವಗೆ
ಅರ್ತಿಯಿಂದ ಸಲಹುವ ಕರ್ತೃಕೇಶವ || ೨೪ ||

ಮರೆಯದೆಲೆ ಹರಿಯನಾಮ ಬರೆದು ಓದಿ ಕೇಳುವರ್ಗೆ
ಕರೆದು ಮುಕ್ತಿ ಕೊಡುವ ನೆಲೆಯಾದಿ ಕೇಶವ || ೨೫ ||

## ಅಹುದಾದರಹುದೆನ್ನಿ

ರಾಗ -- ಮುಖಾರಿ ತಾಳ -- ಝುಂಪೆ

ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ || ಪ ||

ಬಹುಜನರು ನೆರೆತಿಳಿದು ಪೇಳಿ ಮತ್ತಿದನು || ಅ.ಪ ||

ದೇವರಿಲ್ಲದ ಗುಡಿಯು ಪಾಳು ಬಿದ್ದಂಗಡಿಯು
ಭಾವವಿಲ್ಲದ ಭಕುತಿ ಅದು ಕುಹಕಯುಕುತಿ
ಹೇವವಿಲ್ಲದ ಹೆಣ್ಣು ಗಜುಗ ಬೆಳೆದ ಕಣ್ಣು
ಸೇವೆಯರಿಯದ ಧಣಿಯು ಕಲ್ಲಿನಾ ಕಣಿಯು || ೧ ||

ಧರ್ಮವಿಲ್ಲದ ಅರಸು ಮುರಿದ ಕಾಲಿನ ಗೊರಸು
ನಿರ್ಮಲಿಲ್ಲದ ಮನಸು ತಾ ಕೊಳಚೆ ಹೊಲಸು
ಕರ್ಮವಿಲ್ಲದ ಗಂಡು ಕರಿಯ ಒನಕೆಯ ತುಂಡು
ಮರ್ಮವಿಲ್ಲದ ಮಾತು ಒಡಕು ಮಡಕೆಯ ತೂತು || ೨ ||

ಮಕ್ಕಳಿಲ್ಲದ ಸಿರಿಯು ಕೊಳೆತ ತೆಂಗಿನ ತುರಿಯು
ಸೌಖ್ಯವಿಲ್ಲದ ಊಟ ಅದು ಕಾಳಕೂಟ
ಒಕ್ಕಲಿಲ್ಲದ ಊರು ಕೊಳೆತು ನಾರುವ ನೀರು
ಸೊಕ್ಕಿ ನಡೆಯುವ ಭೃತ್ಯ ಅವ ಕ್ರೂರಕೃತ್ಯ || ೩ ||



ಕಂಡು ಕರೆಯದ ನಂಟ ಮೊನೆಯು ಕೆಟ್ಟಿಹ ಕಂಟ
ಉಂಡು ನಗದಿಹ ಮೋರೆ ಅದು ಕಹಿಯ ಸೋರೆ
ದಂಡಿಗಂಜುವ ಬಂಟ ಒಡಕು ಹರವಿಯ ಕಂಠ
ಗಂಡಗಂಜದ ನಾರಿ ಅವಳೆ ಹೆಮ್ಮಾರಿ || ೪ ||

ಬಿಟ್ಟು ನಡೆಯುವ ಗೆಣೆಯು ಹರಕು ತೊಗಲಿನ ಮಿಣೆಯು
ಕೊಟ್ಟು ಕೇಳುವ ದಾತ ಅವ ಹೀನಜಾತ
ಸೃಷ್ಟಿಯೊಳು ಕಾಗಿನೆಲೆಯಾದಿ ಕೇಶವನಂಘ್ರಿ
ಮುಟ್ಟಿ ಭಜಿಸದ ನರನು ಅವನೆ ವಾನರನು || ೫ ||

## ಬಂದೆವಯ್ಯ ಗೋವಿಂದಸೆಟ್ಟಿ

ರಾಗ -- ಪೂರ್ವಿ ತಾಳ -- ಅಟ

ಬಂದೆವಯ್ಯ ಗೋವಿಂದಸೆಟ್ಟಿ ನಿನ್ನ
ಹರಿವಾಣತೀರ್ಥ ಪ್ರಸಾದ ಉಂಟೆನಲಾಗಿ || ಪ ||

ಅಪ್ಪವು ಅತಿರಸ ತುಪ್ಪವು ಚೆನಿಪಾಲು
ಒಪ್ಪುವ ಸಕ್ಕರೆ ಯಾಲಕ್ಕಿಯು
ಅಪರೂಪವಾದ ಕಜ್ಜಾಯರಾಶಿಗಳನ್ನೆಲ್ಲ
ಛಪ್ಪನ್ನ ದೇಶಕೆ ಮಾರುವಸೆಟ್ಟಿ || ೧ ||

ಒಡೆದ ಮಡಕೆ ತಂದು ಅರೆದು ನಾಮವ ಮಾಡಿ
ಕೊಡುವೆ ನೀ ಕಾಸಿಗೆ ಒಂದೊಂದನು
ಒಡಲು ತುಂಬಿ ಮಿಕ್ಕ ಅನ್ನವ ಮಾರಿಸಿ
ಒಡವೆಯ ಗಳಿಸುವ ಕಡುಲೋಭಿಸೆಟ್ಟಿ || ೨ ||

ಶೇಷಗಿರಿಯಲ್ಲಿ ವಾಸಮಾಡಿಕೊಂಡು
ದೇಶದೇಶಕ್ಕೆ ಹೆಸರಾದ ಸೆಟ್ಟಿ
ಕಾಸುಕಾಸಿಗೆ ಬಡ್ಡಿ ಗಳಿಸಿಕೊಂಬ ಆದಿ
ಕೇಶವ ನಾರಾಯಣ ತಿಮ್ಮಸೆಟ್ಟಿ || ೩ ||



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್.
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.

# ಮಹಾ ಮಸ್ತಕಾಭಿಷೇಕ

ಜಗತ್ತಿನಲ್ಲಿ ಪ್ರತಿಮೆಗಳು ಪ್ರತೀಕಗಳು ಹಲವಾರು. ಮೌಂಟ್ ರಾಷ್‌ಮೋರ್‌ನಲ್ಲಿನ ಅಮೆರಿಕದ ಅಧ್ಯಕ್ಷರುಗಳು, ನ್ಯೂಯಾರ್ಕಿನ ಸ್ವಾತಂತ್ರ್ಯ ದೇವಿ, ಜಪಾನಿನ ಬುದ್ಧ, (ಗಯೆಯಲ್ಲೂ ಬಹು ದೊಡ್ಡ ಬುದ್ಧ ಉಂಟು) -- ಇವುಗಳ ಮಧ್ಯೆ ಶ್ರವಣ ಬೆಳಗೊಳದ ಬಾಹುಬಲಿ ವಿಗ್ರಹವೂ ಇದೆ ಎಂದರೆ ಇಲ್ಲಿನ ಪ್ರಾಚೀನತೆ ಪಾವಿತ್ರ್ಯಗಳಿಂದಾಗಿ ಇದಕ್ಕೆ ಪ್ರಾಮುಖ್ಯ ಪ್ರಾಧಾನ್ಯ ಹೆಚ್ಚು.

ಬಾಹುಬಲಿ ವಿಗ್ರಹಗಳೇ ಹಲವಾರು, ಕಾರ್ಕಳ, ವೇಣೂರು, ಮೂಡಬಿದಿರೆ, ಧರ್ಮಸ್ಥಳ -- ಮೊದಲಾದಲೆಲ್ಲ ಕಂಡುಬರುವ ವಿಗ್ರಹಗಳೂ ಐತಿಹಾಸಿಕವೇ, ಆದರೂ ಶ್ರವಣಬೆಳುಗೊಳದ ಬಾಹುಬಲಿ ವಿಗ್ರಹದ ಹಿನ್ನೆಲೆಯೇ ಬೇರೆ, ಅದರ ಎತ್ತರವೇ ಬೇರೆ.

ಔನ್ನತ್ಯಮುಂ ನುತಸೌಂದರ್ಯಮುಂ,
ಊರ್ಜಿತ ಅತಿಶಯಮುಂ, ತನ್ನಲ್ಲಿ
ನಿಂದಿರ್ದುದೇಂ ಕ್ಷಿತಿ ಸಂಪೂಜ್ಯಮೋ,
ಗೊಮ್ಮಟೇಶ್ವರ ಜಿನ ಶ್ರೀ ರೂಪಂ.......

---ಬೊಪ್ಪಣ ಪಂಡಿತನಿಂದ ಈ ರೀತಿಯಾಗಿ ಕೀರ್ತಿಸಲ್ಪಟ್ಟ ಮೂರ್ತಿಯನ್ನು ಗಂಗ ರಾಚಮಲ್ಲನ ಸೇನಾಧಿಪತಿ ಚಾವುಂಡರಾಯ ಕ್ರಿ. ಶ. ೯೮೧ ನೇ ವರ್ಷದಲ್ಲಿ ಪ್ರತಿಷ್ಠಾಪಿಸಿದ್ದಾಗಿ ಜಗತ್ಪ್ರಸಿದ್ಧವಾಗಿದೆ. ಇಂದ್ರಗಿರಿಯ ಬೆಟ್ಟದ ತುದಿಯಲ್ಲಿ ನಲವತ್ತು ಕಿಲೋಮೀಟರಿಗೂ ಹೆಚ್ಚು ದೂರಕ್ಕೂ ಬರಿಕಣ್ಣಿಗೆ ಕಾಣುವ ವಿಗ್ರಹ, ತನ್ನ ಸೌಂದರ್ಯದಿಂದ, ಸಮತೂಕದ ಅವಯವ ವಿವರದಿಂದ, ತ್ಯಾಗ ವೈರಾಗ್ಯಗಳ ವಿಪುಲ ಪರಿಪುಷ್ಟಿಯಿಂದ ಮನಸ್ಸಿನಲ್ಲೂ ಪಡಿಮೂಡುತ್ತದೆ. (ಬಾಹುಬಲಿ ಮನ್ಮಥನೇ ಎಂಬುದು ಬೇರೆಯೇ ವಿಷಯ.)



ಬಾಹುಬಲಿ ಆದಿ ತೀರ್ಥಂಕರ ವೃಷಭದೇವನ ದ್ವಿತೀಯ ಪುತ್ರ. ಭರತ ಚಕ್ರಿಯ ತಮ್ಮ. ಚಕ್ರರತ್ನ ಹುಟ್ಟಿದ ಭಂಡಾರವನ್ನು ಹೊಂದಿದ ಭರತ ದಿಗ್ವಿಜಯಕ್ಕೆ ಹೊರಟಾಗ ಧರಾತಲವೇ ಅವನ ಪಾದಾಕ್ರಾಂತವಾದರೂ ಬಾಹುಬಲಿ ಎದುರು ನಿಂತ. 'ಅಯ್ಯನಿತ್ತುದುಮನ್ ಆನ್ ನಿನಗೆ ಇತ್ತೆನ್; ನೀನ್ ಒಲಿದ ಧರೆಗಂ ಲತಾಂಗಿಗಂ ಆಟಿಸಿದಂದು ನೆಗಳ್ತೆ, ಮಾಸದೇ, ನೆಲೆಸುಗೆ ನಿನ್ನ ವಕ್ಷದೊಳೆ....... ಭಟಖಡ್ಗ ಮಂಡಲೋತ್ಪಲ ವನ ವಿಭ್ರಮತ್ ಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ'ಎನ್ನುತ್ತ ಭರತನಿಗೆ-ರಾಜ್ಯವನ್ನೊಪ್ಪಿಸಿ ವಿರಾಗಿಯಾಗಿ ನಿಂದ. ಅಲ್ಲೂ ಒಂದು ಚೂರು ಕೊರತೆ, ಅದು ಪುರುದೇವನಿಂದಲೇ ತೀರಿತು. ಬಾಹುಬಲಿ ಧರಾಪೂಜ್ಯನಾದ.

ಚಾವುಂಡರಾಯನ ಕೈ ಖಡ್ಗವನ್ನೇ ಅಲ್ಲ ಕಂಟವನ್ನೂ ಹಿಡಿದು ಪಳಗಿದ್ದಿತು. ತ್ರಿಷಷ್ಟಿ ಶಲಾಕಾ ಪುರುಷರ ಕಥೆಯನ್ನು ಚಾವುಂಡರಾಯ ಪುರಾಣವಾಗಿ ಕನ್ನಡಿಗರಿಗೆ ಒದಗಿಸಿಕೊಟ್ಟ ಹಿರಿಯ ಜೀವ ಅದು. ಜಿನಧರ್ಮದಲ್ಲಿ ಅದ್ವಿತೀಯ ಆಸಕ್ತಿ. ರಾಷ್ಟ್ರ

## ಸಪ್ತಗಿರಿ ಬರಹಗಾರರಿಗೆ ಸೂಚನೆ :

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ. ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು**

ಸಪ್ತಗಿರಿ

ತಿ. ತಿ. ದೇವಸ್ಥಾನ, ತಿರುಪತಿ--೫೧೭ ೫೦೭

ಚಿತ್ತೂರು ಜಿಲ್ಲೆ, ಆಂ. ಪ್ರ.

ಕೂಟರ ನಿರ್ಮಾಣ ಉತ್ಸಾಹವೂ ಚಾವುಂಡರಾಯನಿಗೆ ಸ್ವಸಾಯಗತವಾಗಿತ್ತು. ತಾಯಿ ಕಾಳಲಾದೇವಿಯು ಪೌದನ ಪುರದಲ್ಲಿ ಭರತ ನಿರ್ಮಿಸಿದ ಐನೂರು ಬಿಲ್ಲಿನೆತ್ತರದ ಬಾಹುಬಲಿಯ ಮೂರ್ತಿಯನ್ನು ನೋಡಬೇಕೆಂಬಾಸೆ ಹೊಂದಿದಳು. ಅವನನ್ನು ಕಾಣಲೇಬೇಕು ನಂತರವೇ ಮಿಕ್ಕದ್ದೆಲ್ಲ ಎನ್ನುವ ಭಾವ. ತಾಯ ಆಸೆಯನ್ನು ತನ್ನದೇ ಆಸೆಯನ್ನಾಗಿಸಿಕೊಂಡ ಗೊಮ್ಮಟಸಾರ ಕೃತಿಗೆ ಕನ್ನಡ ಟೀಕುಬರೆದ ಚಾವುಂಡರಾಯ-ಪರಿಣಾಮವಾಗಿ ಮೂಡಿತ್ತೊಂದು ಅದ್ಭುತ ಭವ್ಯ ವಿಗ್ರಹ ಇಂದ್ರಗಿರಿಯ ನೆತ್ತಿಯ ಮೇಲೆ.

ಅಂತಹ ಬಾಹುಬಲಿಗೆ ಹನ್ನೆರಡು ವರ್ಷಕ್ಕೊಮ್ಮೆ ಮಹಾಮಸ್ತಕಾಭಿಷೇಕ. ಕ್ಷೀರ, ಗಂಧ, ಪವಿತ್ರ ನದೀ ತೀರ್ಥಗಳಿಂದ ಅಭಿಷೇಕವಾಗುವುದು ದೇವದುರ್ಲಭ ದೃಶ್ಯ. ಈ ಬಾರಿ ಇದೇ ಡಿಸೆಂಬರ್ ೧೯ ರಂದು ನಡೆಯಲಿದೆ. ಅದರ ಪ್ರಯುಕ್ತವಾದ ಉತ್ಸವ ಡಿಸೆಂಬರ್ ೮ ರಿಂದ ೧೯ ರವರೆಗೆ ನಡೆಯುವುದು. ಈ ಬಾರಿಯ ಮಸ್ತಕಾಭಿಷೇಕದ ವೈಶಿಷ್ಟ್ಯವೆಂದರೆ ಇದು ಒಂದುಸಾವಿರ ಹನ್ನೆರಡನೆಯ ವರ್ಷದ ಮಸ್ತಕಾಭಿಷೇಕ. ೧೯೮೨ ರಲ್ಲಿ ಸಾವಿರವರ್ಷದ ಮಸ್ತಕಾಭಿಷೇಕ ನಡೆದಿದ್ದಿತು. ಈಗ ಶ್ರವಣಬೆಳಗೊಳಕ್ಕೆ ಜಗತ್ತಿನ ಎಲ್ಲ ಮೂಲೆಗಳಿಂದ ಭಕ್ತರು ಆಗಮಿಸುವ ನಿರೀಕ್ಷೆಯಿದೆ. ಹಲವಾರು ಸಾರ್ವಜನಿಕ ಸೌಲಭ್ಯಗಳನ್ನು ಶಾಶ್ವತವಾಗಿ ಉಂಟುಮಾಡಲು ಕರ್ನಾಟಕ ಸರ್ಕಾರ ಹತ್ತುಕೋಟಿ ರೂಪಾಯಿಗಳನ್ನು ವೆಚ್ಚ ಮಾಡುತ್ತಿದೆ. ಭೂಗರ್ಭ ಚರಂಡಿ ವ್ಯವಸ್ಥೆ, ಸಿಹಿನೀರಿನ ವ್ಯವಸ್ಥೆಗಳು ಆಗುತ್ತವೆ. ಸ್ನಾನ ಶೌಚ ಗೃಹಗಳೂ, ನಗರ ಸ್ವಚ್ಛತೆ, ಆರೋಗ್ಯಕೇಂದ್ರಗಳು, ದೀಪ, ರಸ್ತೆ ಜಾಲಗಳೂ, ವಿಚಾರಣಾ ಕೇಂದ್ರಗಳೂ, ಉಂಟಾಗಲಿವೆ. ದೆಹಲಿ, ಬೊಂಬಾಯಿ, ಕಲ್ಕತ್ತ, ಬೆಂಗಳೂರು, ಇಂದೋರ್, ಗಳಲ್ಲಿ ಸಮಾಚಾರಕೇಂದ್ರಗಳೂ ತೆರೆಯಲ್ಪಟ್ಟಿವೆ. ಹಲವಾರು ಸ್ವಯಂ ಸೇವಕ ಕೇಂದ್ರಗಳೂ, ಸಂಸ್ಥೆಗಳೂ ಯಾತ್ರಿಕರ ಸೌಲಭ್ಯಗಳನ್ನು ಪೂರೈಸಲು ಸಿದ್ಧವಾಗುತ್ತಿವೆ. ವ್ಯಾಪಕವಾದ ಕಾನೂನು, ಶಿಸ್ತು ಪರಿರಕ್ಷಣಾಜಾಲವೂ ಏರ್ಪಾಡಾಗಲಿದೆ. ತಾತ್ಕಾಲಿಕವಾಗಿ ಒಂದು ಉಪನಗರವೇ ನಿರ್ಮಾಣವಾಗಲಿದೆ.

ಶ್ರವಣ ಬೆಳಗೊಳದ ಶ್ರೀ ಶ್ರೀ ಚಾರುಕೀರ್ತಿ ಭಟ್ಟಾರಕ ಮಹಾಸ್ವಾಮಿಜೀ ಅವರು ಹೇಳುವಂತೆ ಈ ಉಪನಗರದಲ್ಲಿ ೧೫೦೦ ಸ್ವಿಸ್ ಮಾದರಿ ಕಾಟೇಜುಗಳೂ, ೫೦೦ ಭಾರತೀಯ ಟೆಂಟ್‌ಗಳೂ, ೨೦೦ ಸಾಮೂಹಿಕ ಟೆಂಟ್‌ಗಳೂ, ೨೫೦ ಶಾಮಿಯಾನಾಗಳೂ ಉಂಟಾಗುವವು. ಒಟ್ಟಿಗೆ ೪೦,೦೦೦ ಮಂದಿಗೆ ಅವಕಾಶ ನೀಡುವ ಪೆಂಡಾಲ್ ಸಹ ಉಂಟಾ ಲಿದೆ. ದೂರದರ್ಶನದಲ್ಲಿ ಮಸ್ತಕಾಭಿಷೇಕದ ಪ್ರ ರವಾಗಲಿದೆ. ಜೊತೆಗೇ ಇದರಲ್ಲಿ ಪ್ರಧಾನಮಂ ಶ್ರೀ ಪಿ.ವಿ. ನರಸಿಂಹರಾವ್ ಅವರೂ ಭಾಗವಹಿ ವರೆಂದು ನಿರೀಕ್ಷಿಸಲಾಗಿದೆ.

ಇಂದ್ರಗಿರಿಯ ನೆತ್ತಿಯಮೇಲೆ ಕಲ್ಲರಳಿ ಹೂ ದದ್ದು ಕಾರ್ಯಕಾರಣದೊಂದು ಅಪೂರ್ವ ಘ ನೆಯೇ ಎನ್ನಬೇಕು. ಚಾವುಂಡರಾಯನ ತಾಯಿ ಆ ನೋಂಪಿಯಿಂದಾಗಿ ಕನ್ನಡಿಗರಿಗೆ ಭಾರ ಯರಿಗೆ -- ಸವೆಯದ ಸಂಪತ್ತು ದೊರೆತಂ ಆಯಿತು. ಎದುರಿಗಿರುವ ಚಂದ್ರಗಿರಿಯ ಬೆ ದಲ್ಲಿ (ಚಿಕ್ಕಬೆಟ್ಟ) ಹಲವಾರು ಬಸದಿಗಳಿವೆ. ಶಾಂ ನಾಥ ಬಸದಿ, ಪಾರ್ಶ್ವನಾಥ ಬಸದಿ, ಚಾವುಂ ರಾಯನ ಬಸದಿ, ಸವತಿ ಗಂಧವಾರಣ ಬಸ ಇತ್ಯಾದಿ ಬಸದಿಗಳೆಲ್ಲ ದ್ರವಿಡಶೈಲಿಯಲ್ಲಿ ನಿ ತವಾದವುಗಳು, ಶಾಸನ ಬಸದಿಯಲ್ಲಿ ಪುರುದೇವ -- ಆದಿ ತೀರ್ಥಂಕರರ ವಿಗ್ರಹವಿದೆ. ಚಂದ್ರಗು ಬಸದಿ ಮೌರ್ಯ ಅರಸು ಕಟ್ಟಿಸಿದ್ದು, ಚಂದ್ರಗು ಭದ್ರಬಾಹು ಮುನಿಗಳ ಐತಿಹಾಸಿಕತೆಯಿಂದಾ ಇದು ಪ್ರಸಿದ್ಧ, ಚಾವುಂಡರಾಯ ಬಸದಿ ಹೆಸ ಹೇಳುವಂತೆ ಚಾವುಂಡರಾಯ ಕಟ್ಟಿಸಿದ್ದು. ನೇ ನಾಥ ತೀರ್ಥಂಕರರಿಗೆ ಮೀಸಲಾದದ್ದು, ಇಲ್ಲಿ ಚಾವುಂಡರಾಯನ ಆಶ್ರಿತ ಕನ್ನಡದ ಕವಿಚಕ್ರವ ರನ್ನನ ಹಸ್ತಾಕ್ಷರವುಂಟು. ರನ್ನ ಅಜಿತ ತೀರ್ಥ ಕರ ಪುರಾಣ ತಿಲಕವನ್ನೂ ಸಾಹಸ ಭೀಮ ವಿ ಯವನ್ನು ಬರೆದ ಕವಿ. ಇಂದ್ರಗಿರಿಯ ಬಾ ಬಲಿ ವಿಗ್ರಹವನ್ನು ಕವಿ ರನ್ನನೂ ಕೊಂಡಾಡಿದ್ದಾ ಜೊತೆಗೇ ದಾನಚಿಂತಾಮಣಿ ಅತ್ತಿಮಬ್ಬೆಯ ಭ ಯನ್ನೂ ಸ್ಮರಣೀಯ ಅರ್ಥವಾಗುವಂತೆ ವಿವ ದ್ದಾನೆ. ಎಲ್ಲ ಒಂದು ಹೊಸಲೋಕವನ್ನೇ ತೆರೆ ವುದರಲ್ಲಿ ಆಶ್ಚರ್ಯವಿಲ್ಲ. ಜೊತೆಗೇ ಕಾದಂ ಕಾರ ಡಿ|| ತ. ರಾ. ಸುಬ್ಬರಾವ್ ಅವರು ಹತ್ತನೇ ಶತಕದ ಚಾವುಂಡರಾಯನನ್ನು ಕನ್ನಡಿಗರಿಗೆ ಪ ಗಾಣಿಸಿದ್ದಾರೆ; ತಮ್ಮ ಕಥೆಯ ಮೂಲಕ.

ಮಹಾ ಮಸ್ತಕಾಭಿಷೇಕದಲ್ಲಿ ಭಗವಾನ್ ಬಾ ಬಲಿಯನ್ನು ನೋಡುವುದೊಂದು ಆಧ್ಯಾತ್ಮಿಕ ಅ ಭವ. ಅದನ್ನು ಹೊಂದಲು. ಯಾತ್ರಿಕ ಭಕ್ತ ಗಣ ಉತ್ಸಾಹ ಭರದಲ್ಲಿ ನಿರೀಕ್ಷಿಸಿದೆ. ಶ್ರವಣಬೆಳಗೊ ಬೆಂಗಳೂರು, ಹಾಸನ ದಾರಿಯಲ್ಲಿದ್ದು ಹಳೆ ಬೇಲೂರು ಹಳೇಬೀಡು ಧರ್ಮಸ್ಥಳಗಳಿಗೂ ಕ ರವೇ ಆಗಿದ್ದು ಪ್ರವಾಸಕ್ಕೆ ಒಂದು ಉತ್ತಮ ಅವ ಕವನ್ನೂ ಕಲ್ಪಿಸಲಿದೆ.

# ಶ್ರೀ ಶೈಲ ಕ್ಷೇತ್ರ ದರ್ಶನ

---ಡಿ. ರಾಮಕೃಷ್ಣರಾವ್.

ಭೂಮಂಡಲದಲ್ಲಿ ವಿರಾಜಿಸುತ್ತಿರುವ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಶ್ರೀಶೈಲ ಮಲ್ಲಿಕಾರ್ಜುನ ಲಿಂಗವು ಒಂದಾಗಿರುವುದು. ಈ ಕ್ಷೇತ್ರ ಪ್ರಭಾವವು ಅತಿಶಯವಾದುದಾಗಿರುವುದು. ಇಂತಹ ಕ್ಷೇತ್ರ ಭರತಖಂಡದಲ್ಲಿ ಮೆರೆಯುವ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ನಂದಿಕೊಟಕೂರು ತಾಲ್ಲೂಕಿನಲ್ಲಿ ನಲ್ಲಮಲೆ ಬೆಟ್ಟಗಳ ಮೇಲೆ ಬೆಳಗುತ್ತಿರುವುದು. ಇದು ಶೈವಕ್ಷೇತ್ರವು. ಇದಕ್ಕೆ ಶ್ರೀಶೈಲವೆಂತಲೂ, ಶ್ರೀಗಿರಿಯೆಂತಲೂ, ಶ್ರೀಪರ್ವತವೆಂತಲೂ, ಶ್ರೀನಗರವೆಂತಲೂ ಪರಂಪರೆಯಾಗಿ ಬಂದ ನಾಮಧೇಯಗಳಿರುವುವು. ಈ ಕ್ಷೇತ್ರವು ಸಮುದ್ರಮಟ್ಟಕ್ಕೆ ೧೪೦೦ ಅಡಿಗಳ ಎತ್ತರದಲ್ಲಿ ದುರ್ಗಮವಾದ ಪರ್ವತಗಳ ಮಧ್ಯದಲ್ಲಿರುವುದು. ಇಂತಿಷ್ಟು ದುರ್ಗಮವಾಗಿದ್ದರೂ ಭರತಖಂಡದ ನಾಲ್ಕು ದಿಕ್ಕುಗಳಿಂದಲೂ ದರ್ಶನಾಪೇಕ್ಷಿಗಳಾಗಿ ಭಕ್ತರು ಬಂದು ಮಹತ್ತರವಾದ ಭಕ್ತಿಯಿಂದ ದರ್ಶನಮಾಡಿಕೊಂಡು ಕೃತಾರ್ಥರಾಗುವರು. ವಿಶೇಷವಾಗಿ ಆಂಧ್ರದೇಶಸ್ಥರು, ಕನ್ನಡ ನಾಡಿನವರು, ಮಹಾರಾಷ್ಟ್ರರು, ತಮಿಳರು ಪ್ರತಿವರ್ಷವೂ ಶಿವರಾತ್ರಿ ಮುಂತಾದ ಉತ್ಸವ ದಿನಗಳಲ್ಲಿ ಈ ಕ್ಷೇತ್ರಕ್ಕೆ ಬರುತ್ತಿರುವುದು ಅನೂಚಾನವಾಗಿ ನಡೆದಿರುವುದು.

ಶ್ರೀಶೈಲಕ್ಷೇತ್ರ ನಾಮಕ್ಕೆ ಅನುಗುಣವಾಗಿ ಶ್ರೀ ಮಲ್ಲಿಕಾರ್ಜುನಲಿಂಗಕ್ಕೇನೇ ಪ್ರಾಧಾನ್ಯ ಇದ್ದಂತೆ ಕಂಡುಬಂದರೂ ಇಲ್ಲಿ ಶ್ರೀ ಭ್ರಮರಾಂಬದೇವಿಗೂ ಪ್ರಾಧಾನ್ಯ ಇರುವುದು. ಇಲ್ಲಿ ದೇವರಿಗೆಷ್ಟು ಪ್ರಾಧಾನ್ಯವೋ ದೇವಿಗೂ ಅಷ್ಟು ಪ್ರಾಧಾನ್ಯವಿರುವುದು, ಈರ್ವರಿಗೂ, ಸಮತೋಲವಾದ ವರ್ಚಸ್ಸಿರುವುದು.

ಶೈವಕ್ಷೇತ್ರಗಳಲ್ಲಿ ಶ್ರೀ ಶೈಲಕ್ಷೇತ್ರಕ್ಕೇನೆ ಅತ್ಯಂತ ಪ್ರಾಧಾನ್ಯತೆಯಿರುವುದು. ಕಾಶೀಕ್ಷೇತ್ರದಲ್ಲಿ ಮರಣವಾದರೆ ಮುಕ್ತಿಯಾಗುವುದೆಂದು ರೂಢಿಯಿರುವುದು. ಅರುಣಾಚಲ ಕ್ಷೇತ್ರದಲ್ಲಿ ಸ್ಮರಣ ಮಾತ್ರದಿಂದ ಮೋಕ್ಷವು ಲಭಿಸುವುದು. ಶ್ರೀಶೈಲದಲ್ಲಿ ಶಿಖರ ದರ್ಶನ ಮಾತ್ರದಿಂದಲೇ ಮೋಕ್ಷವು ಲಭಿಸುವದೆಂತಲೂ ಪುನರ್ಜನ್ಮವಿಲ್ಲವೆಂತಲೂ ಪ್ರಸಿದ್ಧಿಯಾಗಿರುವುದು. ಈ ಅಂಶವನ್ನೇ--

ಕಾಶ್ಯಾಂತು ಮರಣಾನ್ಮುಕ್ತಿಃ
ಸ್ಮರಣಾದರುಣಾಚಲೇ
ದರ್ಶನಾದಿವ ಶ್ರೀಶೈಲೇ
ಪುನರ್ಜನ್ಮ ನ ವಿದ್ಯತೇ

ಎಂಬ ಆರ್ಯೋಕ್ತಿಯು ಸ್ಪಷ್ಟವಾಗಿ ತಿಳಿಸುತ್ತಿರುವುದು ಮತ್ತು --

ಶ್ರೀ ಶಿಖರೇ ದೃಷ್ಟ್ವೇ
ಪುನರ್ಜನ್ಮ ನ ವಿದ್ಯತೆ

ಎಂಬ ಉಕ್ತಿಯು ಸುಪ್ರಸಿದ್ಧವಾಗಿರುವುದು.

ಶ್ರೀಶೈಲಕ್ಷೇತ್ರವು ಯುಗಯುಗಾಂತರಗಳಿಂದಲೂ ಬಂದುದೆಂದು ಕೆಲವರ ವಿಶ್ವಾಸ. ಕೃತಯುಗದಲ್ಲಿ ಹಿರಣ್ಯಕಶ್ಯಪನು ಇಲ್ಲಿ ಮಲ್ಲಿಕಾರ್ಜುನನನ್ನು ಪೂಜಿಸಿದನೆಂತಲೂ, ತ್ರೇತಾಯುಗದಲ್ಲಿ ಶ್ರೀರಾಮಚಂದ್ರನೂ ತನ್ನ ಅರಣ್ಯವಾಸದ ಸಮಯದಲ್ಲಿ ಇಲ್ಲಿಗೆ ಬಂದು ಈ ಮಹಾಲಿಂಗವನ್ನೂ ಪೂಜಿಸಿದನೆಂತಲೂ, ದ್ವಾಪರಯುಗದಲ್ಲಿ ಪಂಚಪಾಂಡವರಿಲ್ಲಿಗೆ ಬಂದು ದರ್ಶನಲಾಭವನ್ನು ಪಡೆದರೆಂತಲೂ, ಕಲಿಯುಗದಲ್ಲಿ ಆಚಾರ್ಯರು, ನಾಗಾರ್ಜುನ ಮುಂತಾದವರು ಇಲ್ಲಿ ನಿವಾಸ ಮಾಡಿ ಸ್ವಾಮಿಯ ಅನುಗ್ರಹಕ್ಕೆ ಪಾತ್ರರಾದರೆಂತಲೂ ಆರ್ಯರು ಹೇಳುತ್ತಿರುವರು.

ಮಾನವನ ಜೀವನಕ್ಕೆ ಶ್ರೀಶೈಲದಿಂದ ಹೆಚ್ಚು ಸಂಬಂಧವಿದ್ದಂತೆ ಕಂಡುಬಂದಿದೆ. ಹೇಗೆಂದರೆ, ಸನಾತನ ಧರ್ಮವನ್ನು ಅನುಸರಿಸುವ ಹೈಂದವರೆಲ್ಲರೂ ನಿತ್ಯ ಪೂಜಾವಿಧಾನದಲ್ಲಿಯೂ ಷೋಡಶಕರ್ಮಗಳ ಅನುಷ್ಠಾನದಲ್ಲಿಯೂ, ತರ್ಪಣಾದಿಗಳಲ್ಲಿಯೂ, ಗ್ರಹಣಕಾಲದಲ್ಲಿಯೂ ಇನ್ನೂ ಅನೇಕ ಸಂದರ್ಭಗಳಲ್ಲಿ ಸಂಕಲ್ಪವನ್ನು ಮಾಡುವಕಾಲಕ್ಕೆ ಶ್ರೀಶೈಲವನ್ನು ಸ್ಮರಣಮಾಡಿಯೇ ತೀರಬೇಕು. ಆದುದರಿಂದ ಶ್ರೀಶೈಲಕ್ಷೇತ್ರಕ್ಕೆ ಎಂತಹ ಪ್ರಧಾನ್ಯತೆ ಇರುವುದೆಂಬುದನ್ನು ಯೋಚಿಸಿ ಮನನ ಮಾಡಿಕೊಳ್ಳಬೇಕು. ಇದಲ್ಲದೆ ಷಣ್ಮತ್ರಸ್ಥಾಪನಾಚಾರ್ಯರಾದ ಆದಿ ಶಂಕರಾಚಾರ್ಯರು ಈ ಕ್ಷೇತ್ರದಲ್ಲಿದ್ದಂತೆಯೂ, ಅವರಿರುವ ಕಾಲಕ್ಕೆ ಶ್ರೀ ಲಕ್ಷ್ಮೀ ನರಸಿಂಹ ಕರಾವಲಂಬನ ಸ್ತೋತ್ರವನ್ನು ಅಷ್ಟಕವಾಗಿ ಹೇಳಿದರೆಂದೂ ಹೇಳಲಾಗಿದೆ.








ಈ ಮಹಾಕ್ಷೇತ್ರವು ವಿಶೇಷವಾದ ಭೂಭಾಗವನ್ನು ಆಕ್ರಮಿಸಿಕೊಂಡಿರುವುದು. ಈ ಭಾಗದ ಉದ್ದವು ೩೦ ಗಾವುದದಳತೆಯಾಗಿರವುದು, ವೈಶಾಲ್ಯವು ೩೦ ಗಾವುದಗಳ ಅಳತೆಯಾಗಿರುವುದು, ಇದಕ್ಕೆ ನಾಲ್ಕುದಿಕ್ಕುಗಳಲ್ಲಿಯೂ ನಾಲ್ಕು ದ್ವಾರಗಳಿರುವುವು. ಈ ಮಧ್ಯದಲ್ಲಿರುವ ಪ್ರದೇಶವೆಲ್ಲವೂ ಅತ್ಯಂತ ಪವಿತ್ರವಾದುದಾಗಿಯೂ ಅನೇಕ ಕ್ಷೇತ್ರಗಳಿಂದ ಪ್ರಕಾಶಿಸುತ್ತಿರುವುದು. ಇದಕ್ಕೆ ಮೂಡಲಿನಲ್ಲಿ ತ್ರಿಪುರಾಂತಕ ಇದೊಂದು ದ್ವಾರ. ಇದು ಕರ್ನೂಲು ಜಿಲ್ಲೆಯ ಮಾರ್ಕಾಪುರದ ತಾಲೂಕಿನಲ್ಲಿರುವುದು. ದಕ್ಷಿಣದ್ವಾರವು ಕರ್ನೂಲು ಪಟ್ಟಣದಲ್ಲಿರುವುದು. ಉತ್ತರ ದ್ವಾರವು ತೆಲಂಗಾಣದಲ್ಲಿರುವುದು. ಈ ನಾಲ್ಕು ದ್ವಾರಗಳು ಮಹತ್ತರವಾದ ಪವಿತ್ರಸ್ಥಳಗಳೆಂದು ಪ್ರಸಿದ್ಧವಾಗಿರುವುವು. ಇವುಗಳಲ್ಲಿ ಅನೇಕ ಪುಣ್ಯತೀರ್ಥಗಳೂ, ಹಲವು ದೇವಾಲಯಗಳು ಇರುವುವು.

ಈ ಪ್ರಕಾರವಾಗಿ ಸಮಭೂಮಿಯಿಂದ ಕೂಡಿದ ಶ್ರೀಶೈಲವು ೧೫೦೦ ಅಡಿಗಳ ಎತ್ತರ ದಲ್ಲಿದ್ದು ತಂಪಾದ ವಾತಾವರಣದಿಂದ ಕೂಡಿಕೊಂಡು ಮನಸ್ಸಿಗೆ ಉಲ್ಲಾಸವನ್ನುಂಟುಮಾಡುತ್ತಿರುವುದು.

ಭರತಖಂಡದಲ್ಲಿರುವ ಪುಣ್ಯಕ್ಷೇತ್ರಗಳೆಲ್ಲಕ್ಕೂ ಒಂದೊಂದು ಸ್ಥಲ ಪುರಾಣವಿರುವುದು. ಶ್ರೀಶೈಲಕ್ಕೆ ಸಹ ಅಂತಹ ಸ್ಥಲಪುರಾಣವಿರುವುದು. ಆ ಪುರಾಣವು ೧೨ ಮಹಾಪುರಾಣಗಳಲ್ಲೊಂದಾದ ಸ್ಕಂಧ ಪುರಾಣದಲ್ಲಿ ಶ್ರೀ ಶೈಲಖಂಡದಲ್ಲಿ ಉಕ್ತವಾಗಿರುವುದು. ಇದು ೩೨ ಅಧ್ಯಾಯಗಳಲ್ಲಿ ೧೨೫೦೦ ಶ್ಲೋಕಗಳಿಂದ ಹೇಳಲ್ಪಟ್ಟಿರುವುದು. ಈ ಮಹಾತ್ಮ್ಯವನ್ನು ಪೂರ್ವದಲ್ಲಿ ಶ್ರೀ ಪರಮೇಶ್ವರನು ಪಾರ್ವತಿಗೆ ಹೇಳಿರುವನೆಂದು ಉಕ್ತವಾಗಿರುವುದು.

ಆ ವಿಷಯವನ್ನೇ ಶ್ರೀ ವೇದವ್ಯಾಸ ಮಹರ್ಷಿಗಳ ಅಪೇಕ್ಷೆಯಂತೆ ಸನತ್ಕುಮಾರ ಮಹರ್ಷಿಯು ಬೋಧಿಸಿದಂತಿರುವುದು. ಇದನ್ನೇ ನಾಗಲೂಟಿ ಶೇಷನಾಥಾರ್ಯನೆಂಬ ಕವಿಯು ಶ್ರೀ ಪರ್ವತ ಪುರಾಣವೆಂಬ ಹೆಸರಿನಿಂದ ಒಂದು ಆಂಧ್ರದ ಪದ್ಯ ಕಾವ್ಯವನ್ನು ರಚಿಸಿರುವನು.

ಈ ಮಹಾತ್ಮ್ಯದಲ್ಲಿ ಶ್ರೀಶೈಲಕ್ಕೂ ಅರ್ಥಾತ್ ಶ್ರೀಪರ್ವತಕ್ಕೂ, ಮಲ್ಲಿಕಾರ್ಜುನಸ್ವಾಮಿಗೂ, ಭ್ರಮರಾಂಬಾದೇವಿಗೂ ಆಯಾ ನಾಮಧೇಯಗಳು ಬಂದ ವಿಧಾನವನ್ನು ಕಥಾರೂಪವಾಗಿ ವಿವರಿಸಲ್ಪಟ್ಟಿರುವುದು.

ಶ್ರೀಶೈಲಕ್ಷೇತ್ರ -- ಮಹಾತ್ಮ್ಯದಲ್ಲಿ ಶ್ರೀಶೈಲಕ್ಕೂ, ಅರ್ಥಾತ್ ಶ್ರೀಪರ್ವತಕ್ಕೂ, ಮಲ್ಲಿಕಾರ್ಜುನಸ್ವಾಮಿಗೂ, ಭ್ರಮರಾಂಭಾದೇವಿಗೂ ಆಯಾ ನ ಧೇಯಗಳು ಬಂದ ವಿಧಾನವನ್ನು ಕ್ಷೇತ್ರದ ಆ ಪ್ರಕಾರಕ್ಕೆ ಹೊರಭಾಗದಲ್ಲಿರುವ ಎರಡು ಸ್ತಂಭ ಮೇಲೆ ಕೆತ್ತಲ್ಪಟ್ಟಿರುವುದು.

ಭ್ರಾಮರೀ ಶಕ್ತಿಸ್ವರೂಪಿಯಾದ ಭ್ರಮರಾಂಬ ವರ ಪ್ರಸಾದಿಯಾದ ಕನ್ಯೆಯಂತೆ, ಆ ದೇ ನಿವಾಸವು ಮೈಸೂರು ರಾಷ್ಟ್ರ ಆದುದರಿಂದಲೆ ಭ್ರಮರಾಂಬಾದೇವಿಯವರ ಸನ್ನಿಧಿಯಲ್ಲಿ ಚೈತ್ರೋ ತ್ಸವವು ಜರುಗುವ ಕಾಲಕ್ಕೆ ಮೈಸೂರು ಪ್ರಾಂ ವರು ತಮ್ಮ ಹೆಣ್ಣುಮಗಳಿಗೆ ಕಾಣಿಕೆಗಳನ್ನು ತ ಕೊಡುವುದು, ಇಂದಿನವರೆವಿಗೂ ಸಾಂಪ್ರದಾ ವಾಗಿ ಬಂದಿರುವುದು.

## ಚಾರಿತ್ರಿಕ ವಿಷಯಗಳು

ಪುರಾಣಾಂಶಗಳನ್ನು ಕುರಿತು ಯೋಚಿಸಿ ಶ್ರೀಶೈಲಕ್ಷೇತ್ರವು ಯುಗ -- ಯುಗಾಂತರಗಳ ಬಂದ ಸುಪ್ರಭಾವಯುತವಾದ ಸ್ಥಳವೆಂದು ತೋ ತ್ತದೆ. ಹಲವಾರು ಗ್ರಂಥಗಳನ್ನು ಅನುಸರಿಸಿ ವಂಶದ ರಾಜರಕಾಲದಲ್ಲಿ ಈ ಕ್ಷೇತ್ರವು ಶಕ್ಕೆ ಬಂದಿತೆಂದು ಊಹಿಸುವುದಕ್ಕೆ ಅವಕಾಶ ವುದು.

ದಿಟ್ಟಗಳನ್ನು ಹತ್ತಿ ಸಮಪ್ರದೇಶಕ್ಕೆ ಹೋ ಮಂಟಪಗಳ ಮತ್ತು ಕುಡ್ಯಗಳು, ಭವನ ಶಿ ವಾದ ಭಾಗಗಳು ಅಸಂಖ್ಯಾತವಾಗಿ ಕಾಣುತ್ತ ಸ್ಥಿತಿಯನ್ನು ಕಂಡಲ್ಲಿ ಅಲ್ಲಿ ದೊಡ್ಡ ನಗರ ತೆಯೂ ಸುಸ್ಪಷ್ಟವಾಗಿ ತಿಳಿಯಬಹುದಾಗಿದೆ.

ಪೂರ್ವಕಾಲದಲ್ಲಿ ಮಹತ್ತರ ವೈಭವದಿಂದ ಗುತ್ತಲಿದ್ದ ಈ ಕ್ಷೇತ್ರವು ಕ್ರಿ.ಶ. ೩ನೇ ಶತಮಾನ ಇಕ್ಷ್ವಾಕುಗಳ ಕಾಲದಲ್ಲಿ ಬೌದ್ಧ, ಶೈವ ಮತಕ ಗಳ ಮೂಲದಿಂದ ನಷ್ಟವಾಯಿತೆನ್ನುತ್ತಾರೆ. ೬ನೇ ಶತಮಾನದಲ್ಲಿ ಚಾಳುಕ್ಯರ ಕಾಲದಲ್ಲಿ ರುದ್ಧರಿಸಲ್ಪಟ್ಟು, ಕಾಕತೀಯರ ಕಾಲದಲ್ಲಿ ಅತ್ಯ ತವಾಗಿ ಅಭಿವೃದ್ಧಿ ಹೊಂದಿ ನಂತರದ ಕಾಲ ಕ್ಷೀಣದೆಶೆಗೆ ಬಂದು ಶಿಥಿಲವಾಗಿ ಹೋಯಿತೆ ತಿಳಿದುಬಂದಿದೆ.

ಶ್ರೀಶೈಲದ ವಿಷಯ ಸ್ಕಂಧಪುರಾಣದಲ್ಲಿರು ರಿಂದಲೂ, ಪುರಾಣಗಳು ವ್ಯಾಸಕೃತವೆಂದು ಭ ಸಲ್ಪಡುವುದರಿಂದಲೂ, ಈ ಕ್ಷೇತ್ರವು ಬಹು ಪ್ರಾ ನವಾದುದೆಂದು ನಂಬಬಹುದು. ವ್ಯಾಸಮ ರ್ಷಿಯು ತನ್ನ ಗುರುವಾದ ಘಂಟಾಕರ್ಣ ಶಿ ಚಾರ್ಯರೊಡನೆ ಕಲೆತು ಇಲ್ಲಿ ತಪವನ್ನು ಆ ಸಿದಂತೆಯೂ, ಆ ಕಾಲದಲ್ಲಿ ಶ್ರೀಶೈಲ ಖಂಡ

ರಚಿಸಿದಂತೆಯೂ, ಇಲ್ಲಿನ ಘಂಟಾಕರ್ಣ ಮಠವೇ ವ್ಯಾಸಮಹರ್ಷಿಗಳ ಗುರುಮಠವಾಗಿರುವುದೆಂದು ವೀರಶೈವ ಪೀಠಾದಿಪತಿಗಳು ಕಂಠೋಕ್ತವಾಗಿ ಹೇಳುತ್ತಾರೆ. ಶಂಕರಾಚಾರ್ಯರು ತಮ್ಮ ಶಿವಾನಂದಲಹರಿಯಲ್ಲಿರುವ ೨ ಶ್ಲೋಕಗಳಲ್ಲಿ "ಸೇವೇ ಶ್ರೀಗಿರಿ ಮಲ್ಲಿಕಾರ್ಜುನ ಮಹಾಲಿಂಗ ಶಿವಲಿಂಗಿತಂ" ಎಂದು ಈ ಕ್ಷೇತ್ರವನ್ನು ತ್ರಿಕರಣ ಶುದ್ಧಿಯಿಂದ ಪ್ರಶಂಸೆಮಾಡಿರುವರು. ಈ ಆದ್ಯಶಂಕರಾಚಾರ್ಯರಲ್ಲದೆ ವೀರಶೈವ ಮತಸ್ಥಾಪನಾಚಾರ್ಯರಾದ ರೇಣುಕಾದಿ ಪಂಚಾಚಾರ್ಯರು, ಅಕ್ಕಮಹಾದೇವಿ, ಹೇಮರೆಡ್ಡಿಮಲ್ಲಮ್ಮ ಮುಂತಾದವರು ಸಹ ಈ ಪವಿತ್ರ ಕ್ಷೇತ್ರದಲ್ಲಿ ತಪವನ್ನಾಚರಿಸಿ ಸಿದ್ಧಿಹೊಂದಿದಂತೆ ತಿಳಿಯುತ್ತದೆ.

೧೪ ನೇ ಶತಮಾನದ ಪ್ರಾರಂಭದಲ್ಲಿ ಅಲ್ಲಿಯ ನಿರ್ವಹಣಕ್ಕೆ ಸಂಬಂಧಿಸಿದ್ದ ಇಲ್ಲಿಯ ಶಾಸನವೇ ಪ್ರಾಚೀನವಾದದ್ದು ಮತ್ತು ಇದರಲ್ಲಿ ದೇವಾಲಯಕ್ಕೆ ಕೊಟ್ಟ ೭೦ ಗ್ರಾಮಗಳ ಹೆಸರುಗಳು ತೆಲುಗು ದೇಶದ ರಾಜರ ಹೆಸರುಗಳು, ನಾಯಕರ ನಾಮಧೇಯಗಳು ಉದಾಹರಿಸಲ್ಪಟ್ಟಿವೆ. ಮಹಾರಾಷ್ಟ್ರ ಚಕ್ರವರ್ತಿ ಛತ್ರಪತಿ ಶಿವಾಜಿಯು ಈ ದೇವಾಲಯದ ಉತ್ತರ ಗೋಪುರವನ್ನು ನಿರ್ಮಿಸಿದನು. ಈಗಲೂ ಶಿವಾಜಿ ಗೋಪುರವೆಂದು ಪ್ರಸಿದ್ಧವಾಗಿರುತ್ತದೆ. ವಿಜಯನಗರ ಸಾಮ್ರಾಜ್ಯವು ಪತನವಾದ ಬಳಿಕ ಶ್ರೀಶೈಲದೇವಸ್ಥಾನವು ಕ್ಷೀಣ ದೆಸೆಗೆ ಬಂದಿತು.

ಇಂತಹ ಕ್ಷೀಣಪರಿಸ್ಥಿತಿಯಲ್ಲಿರುವ ಶ್ರೀಗಿರಿ ಕ್ಷೇತ್ರವನ್ನು ಕೇಂದ್ರಪ್ರಭುತ್ವದವರು, ಆಂಧ್ರಪ್ರಭುತ್ವದವರು ಪ್ರಪ್ರಥಮದಲ್ಲಿ ಜನಸಂಚಾರಕ್ಕೆ ದುರ್ಗಮವಾದ ಮಾರ್ಗವನ್ನು ಸುಗಮಮಾಡಲು ನಿಶ್ಚಯಿಸಿ, ಮಾರ್ಗಕ್ರಮಣಕ್ಕೆ ಅನುಕೂಲಮಾಡಿಕೊಟ್ಟಿರುವರು. ಮೂರು ನಾಲ್ಕು ಪರಿಶ್ರಮದಿಂದ ನಡೆದು ಹೋಗಬೇಕಾದ ಹಾದಿಯು. ಒಂದು ಗಂಟೆಯ ಕಾಲದಲ್ಲಿ ಮೋಟಾರು ಮೂಲಕ ದೋರ್ನಾಲದಿಂದ ಶ್ರೀಶೈಲಗಿರಿಯನ್ನು ಬಹುಸುಗಮವಾಗಿ ತಲಪಬಹುದು.

## ಕಾವ್ಯಗಳಲ್ಲಿ ಶ್ರೀಶೈಲ ವರ್ಣನೆ

ಪಂಚಮವೇದವೆಂದು ಪ್ರಸಿದ್ಧವಾದ ಮಹಾಭಾರತದಲ್ಲಿ ವೇದವ್ಯಾಸರು ಅರ್ಜುನನತೀರ್ಥಯಾತ್ರಾ ಸಂದರ್ಭವನ್ನು ವರ್ಣಿಸುತ್ತಾ ಈ ಕ್ಷೇತ್ರ ಸಂದರ್ಶನದಿಂದ ಬೆರಗಾಗಿ ಅರ್ಜುನನು ಪರಿಪರಿವಿಧದಿಂದ ಶ್ರೀಗಿರಿಯನ್ನು ವರ್ಣಿಸಿದ್ದಾನೆಂದು ತಿಳಿಸಿರುವರು. ಕವಿಸಾರ್ವಭೌಮನಾದ ಶ್ರೀನಾಥನು ಸಹ ಶ್ರೀಶೈಲದಲ್ಲಿಯೇ ಕೆಲವು ಕಾಲವಿದ್ದು ಶಿವರಾತ್ರಿ ಮಹಾತ್ಮವನ್ನು ರಚಿಸಿದಂತೆ ತಿಳಿದುಬರುತ್ತೆ. ತೆಲುಗು ದೇಶಕ್ಕೆ ತ್ರಿಲಿಂಗದೇಶವೆಂಬ ಹೆಸರು ಪ್ರಸಿದ್ಧವಾಗಿದೆ. ಇದು ಪದ್ದುಗಳನ್ನನುಸರಿಸಿ ಏರ್ಪಾಡಾದಂತೆಯೂ ಶ್ರೀಶೈಲ, ಕಾಳೇಶ್ವರ, ದಕ್ಷಾರಾಮ ಎಂಬ ಮೂರು ಕ್ಷೇತ್ರಗಳಿಗೆ ಮದ್ಯದಲ್ಲಿರುವ ದೇಶವೇ ತೆಲುಗು ದೇಶವಾದಂತೆಯೂ, ಆ ಕ್ಷೇತ್ರಗಳು ಮೂರರಲ್ಲೂ ಶಿವಲಿಂಗಗಳಿರುವುದರಿಂದಲೇ ಆ ದೇಶಕ್ಕೆ ತ್ರಿಲಿಂಗ ದೇಶವೆಂಬ ನಾಮವು ಸಿದ್ಧವಾದಂತೆಯೆಂದು ತಿಳಿದುಬರುತ್ತದೆ.



ವೆನ್ನಕೋಟ ಪೆದ್ದನಕವಿಯಿಂದ ರಚಿತವಾದ ಕಾವ್ಯಾಲಂಕಾರ ಚೂಡಾಮಣಿಯಲ್ಲಿ :

ಧರಶ್ರೀ ಪರ್ವತಕಾಳೇಶ್ವರ
ದ್ರಾಕ್ಷಾರಾಮ ಸಂಜ್ಞವರಲಿತ್ರಿಲಿಂಗಾ
ಕರಮು ಗಟ ನಾಂಧ್ರದೇಶಂ

.....................................................

ತತ್ರಿಲಿಂಗಪದಮು ತದ್ಭವಂಬಗುಟಚೇ
ತೆಲುಗು ದೇಶ ಮುನಗಂದೇಟ ಪಡಿಯೆ

ಆದುದರಿಂದ ಆಂಧ್ರಪ್ರದೇಶಕ್ಕೆ ತ್ರಿಲಿಂಗದೇಶವೆಂಬ ಹೆಸರುಂಟಾಗಿರುವುದಕ್ಕೆ ಶ್ರೀಶೈಲದ ಪ್ರಧಾನ್ಯತೆ ಸಹಸ್ರ ಮುಖದಿಂದ ವರ್ಣಿಸಲವಕಾಶವಾಯ್ತು.

ಆಂಧ್ರಪ್ರದೇಶದ ಪ್ರತಿಗ್ರಾಮದಲ್ಲಿಯೂ ಭ್ರಮರಾಂಬಾಷ್ಟಕ ಪಾರಾಯಣ ಮಾಡುವುದು ಅನೂಚಾನವಾಗಿ ನಡೆದು ಬಂದಿದೆ. ದೊಡ್ಡ ಸಂತರ್ಪಣೆ ಸಮಯದಲ್ಲಿ ಭೋಜನಾರಂಭ ಕಾಲಕ್ಕೆ ಈ ಅಷ್ಟಕವನ್ನು ಶ್ರಾವ್ಯವಾಗಿ ಪಠಿಸುತ್ತಾ ಅನ್ನಪೂರ್ಣಾದೇವಿಯನ್ನು ಸ್ತುತಿಸುವ ಪರಂಪರಾಚಾರವು ಇಂದಿಗೂ ಸಾಂಪ್ರದಾಯಬದ್ಧವಾಗಿರುವುದು.

ಅಕ್ಷಯಂಬುಗ ಕಾಶಿಲೋಪಲ
ಅನ್ನಪೂರ್ಣಾ ಭವಾನಿವೈ
ಸಾಕ್ಷಿ ಗಣಪತಿ ಕನ್ನತಲ್ಲಿವಿ
ಸದ್ಗುಣಾವತಿ ಶಾಂಭವೀ
ಮೋಕ್ಷ ಮೊಸಗೇಡಿ ಕನಕದುರ್ಗವು
ಮೂಲಕಾರಣ ಶಕ್ತಿವೀ
ಶಿಕ್ಷಚೇತುವು ಕ್ರೂರಜನುಲನು
ಶ್ರೀಗಿರಿ ಭ್ರಮರಾಂಬಿಕಾ

ಈ ಸ್ತುತಿಯ ಶ್ರೀಶೈಲದ ಭ್ರಮರಾಂಬಿಕಾದೇವಿಯ ಸಂಬಂಧವೆಂಬುವುದು ಸೂರ್ಯನ ಬೆಳಕಿನಂತೆ ಸ್ಪಷ್ಟವಾಗಿರುವುದು. ಆಂಧ್ರಗ್ರಂಥಗಳಲ್ಲಿ ಮಾತ್ರವಲ್ಲದೇ ಸಂಸ್ಕೃತ ಗ್ರಂಥಗಳಲ್ಲಿಯೂ ಕನ್ನಡ ಗ್ರಂಥಗಳಲ್ಲಿಯೂ, ತಮಿಳು ಭಾಷೆಯ ಗ್ರಂಥಗಳಲ್ಲಿಯೂ, ಈ ಮಹಾಕ್ಷೇತ್ರದ ಪ್ರಶಂಸೆ ನಿಯಮಬದ್ಧವಾಗಿರುವುದು.

ಶ್ರೀಶೈಲ ಮಹಾಕ್ಷೇತ್ರವುಯೋಗಿಗಳಿಗೂ, ಪೀಠಾಧಿಪತಿಗಳಿಗೂ ಮಹಾಭಕ್ತರಿಗೂ ನಿವಾಸವಾಗಿದ್ದಂತೆಯೇ ಸಿದ್ಧರಿಗೆ ಸಹಾಯ ಸಮೀಚೀನವಾಗಿ ನೆಲೆವೀಡಾಗಿದ್ದಂತೆ ಕಂಡುಬರುತ್ತದೆ. ಇಲ್ಲಿಯ ಬೆಟ್ಟಗಳ ಮೇಲೆ ಅತ್ಯಂತಾದ್ಭುತ ಶಕ್ತಿಯನ್ನುಂಟುಮಾಡುವಂಥ ಔಷಧಗಳು, ಅಭ್ರಕವು, ತಾಳಕವು, ಮಣಿಶಿಲೆ, ಶಿಲಾಜಿತ್ತು, ಸ್ಫಟಿಕ, ಕಾಂತ -- ಮುಂತಾದ

## ದಾಸಸಾಹಿತ್ಯ ಪ್ರಾಜೆಕ್ಟ್, ತಿ. ತಿ. ದೇ.

# ಅತಿ ಸುಲಭದರದಲ್ಲಿ ಅತ್ಯುತ್ತಮ ಧ್ವನಿಸುರುಳಿಗಳು

ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಕುರಿತು ಕನ್ನಡದ ಹರಿದಾಸರು ಪರಂಪರೆಯಿಂದ ಹಾಡುತ್ತಿದ್ದು, ಭಕ್ತಿ ಸಾಹಿತ್ಯದ ಭಂಡಾರವೇ ಇಂದು ನಮಗೆ ತವನಿಧಿಯಾಗಿ ದೊರೆತಿದೆ. ಶ್ರೀ ಪಾದರಾಜ ವ್ಯಾಸರಾಜ, ಪುರಂದರ, ಕನಕ, ಪ್ರಸನ್ನವೆಂಕಟ, ವಿಜಯದಾಸ ಜಗನ್ನಾಥದಾಸ ಗೋಪಾಲದಾಸರೇ ಮೊದಲಾಗಿ ನೂರಾರು ಮಂದಿ ಸಾವಿರಾರು ಕೀರ್ತನೆಗಳನ್ನು ಮುಂದಿನವರಿಗೆ ಬಳುವಳಿಯಾಗಿ ಕೊಟ್ಟು ಹೋಗಿದ್ದಾರೆ. ಅಂತಹ ಹಿರಿಯರ ಕೀರ್ತನೆಗಳನ್ನು ಕೇಳುವ ಮನನಮಾಡುವ ಅವಕಾಶವನ್ನು ಕಲ್ಪಿಸಲು ತಿ.ತಿ.ದೇ. ಧ್ವನಿಸುರುಳಿಗಳನ್ನು ತಯಾರಿಸಿದೆ. ನಾಡಿನ ಖ್ಯಾತ ಗಾಯಕ ವಿದ್ವನ್ಮಣಿಗಳು ಹಾಡಿರುವ ಈ ಗೀತೆ ಮಾಲೆಗಳು ಸುಲಭದರದಲ್ಲಿ ದೊರೆಯುವಂತೆ ಏರ್ಪಾಡು ಮಾಡಲಾಗಿದೆ.

| ಸಂ | ಧ್ವನಿಸುರುಳಿಯ ಹೆಸರು | ಗಾಯಕರು | ಗೀತಕಾರರು |
|---|---|---|---|
| 3001 | ಪುರಂದರದಾಸರು -- ಶ್ರೀನಿವಾಸಸಂಸ್ತುತಿ | ಸರೋಜ, ಲಲಿತ. | ಪುರಂದರದಾಸರು. |
| 3002 | ಪುರಂದರದಾಸರು -- ಶ್ರೀನಿವಾಸವೈಭವ | ಎಸ್.ಎಲ್. ವಸಂತಕುಮಾರಿ | ಪುರಂದರದಾಸರು. |
| 3003 | ಹರಿದಾಸರು ಕಂಡ ಶ್ರೀನಿವಾಸ | ಶ್ರೀ ಶ್ರೀ ವಿದ್ಯಾಭೂಷಣ ತೀರ್ಥರು | ವಿವಿಧ ಹರಿದಾಸರು. |
| 3004 | ತಿರುಮಲೆಯ ಚೆಲುವ | ವಾಣಿ ಜಯರಾಂ | ಪ್ರಸನ್ನ ವೆಂಕಟದಾಸರು. |
| 3005 | ಮೂರುನಾಮಗಳ ಮೂರುತಿ | ಸರೋಜ, ಲಲಿತ. | ಜಗನ್ನಾಥದಾಸರು, ಗೋಪಾಲದಾಸರು. |
| 3006 | ಶ್ರೀನಿವಾಸ ತತ್ವ | ಬೇಲೂರುಸೋದರಿಯರು | ಪುರಂದರದಾಸರು. |
| 3007 | ಭಳಿರೆ ತಿರುಮಲರಾಯ | ಆರ್. ಕೆ. ಶ್ರೀಕಂಠನ್ | ನಿಜದಾಸರು. |
| 3008 | ಗೋವಿಂದ ಮಿಠಾಯಿ | ರತ್ನಮಾಲಾ ಪ್ರಕಾಶ್. | ಪುರಂದರದಾಸರು. |
| 3009 | ಗೋವಿಂದ ಗಾನಾಮೃತ | ಸಂತಭದ್ರಗಿರಿ ಅಚ್ಯುತದಾಸರು | ಪುರಂದರದಾಸರು. |

ಪ್ರತಿಯೊಂದು ಕ್ಯಾಸೆಟ್‌ನ **ಬೆಲೆ ರೂ. 25/-** ಮಾತ್ರ. ಅಂಚೆವೆಚ್ಚ ಪ್ರತ್ಯೇಕ.

ಬರೆಯಿರಿ : --- ಸಂಪಾದಕರು -- ಪುಸ್ತಕ ಮಾರಾಟ ವಿಭಾಗ, ತಿ.ತಿ.ದೇ. ತಿರುಪತಿ.



ಪದಾರ್ಥಗಳಿರುವುವು. ಸಿದ್ಧರು, ವೈದ್ಯರು, ಅಪೂವ ಗಳಾದ ಸಾಧನೆ ಮಾಡಿ ಇವುಗಳಿಂದ ದೊಡ್ಡಲಾ ವನ್ನು ಪಡೆಯುತ್ತಿದ್ದರೆಂದು ವೇದ್ಯವಾಗುತ್ತದೆ.

ಶ್ರೀಶೈಲ ಕ್ಷೇತ್ರವು ದುರ್ಗಮಗಳಾದ ಬೆಟ್ಟಗ ಮೇಲಿರುವುದರಿಂದ ಬೆಟ್ಟಗಳು ಅರಣ್ಯಪ್ರಾಂತದ ರುವುದರಿಂದಲೂ ಅಲ್ಲಲ್ಲಿ ಕ್ರೂರ ಮೃಗಗಳ ಸಂಚ ರವಿರುವುದರಿಂದಲೂ ಸ್ವಾಮಿಯ ದರ್ಶನಾಪೇಕ್ಷಿ ಳಾಗಿ ಬರುವ ಯಾತ್ರಿಕರಿಗೆ ತುಂಬಾ ಕಷ್ಟವಾ ದ್ದಿತು. ಶಿವರಾತ್ರಿ, ಯುಗಾದಿ ಮುಂತಾದ ಉತ್ಸ ಸಮಯಗಳಲ್ಲಿ ಸಹ ಜನರು ಅಸಂಖ್ಯವಾಗಿ ಹೋ ಮಲ್ಲಿಕಾರ್ಜುನ ದೇವರನ್ನು ದರ್ಶನ ಮಾಡಿಕೊಳ ವುದು ಕೇವಲ ಕಷ್ಟಸಾಧ್ಯವಾಗಿದ್ದಿತು. ಉತ್ಸವಕ ಲಗಳಲ್ಲಿಯೂ ಮಾರ್ಗಗಳಲ್ಲಿ ದಾಸೋಹಗಳನ್ನು ಅನ್ನದಾನ ಮಾಡುವ ಛತ್ರಗಳು ಅರವಟ್ಟಿಗೆಗಳ ಏರ್ಪಡಿಸುವುದುಂಟು. ನಡೆದು ಪ್ರಯಾಣಮಾಡ ವವರು ಅತ್ಯಂತ ಕಷ್ಟವೆಂದು ಭಾವಿಸುತ್ತಿದ್ದರು.

ಈಗ ತಿರುಪತಿಯಿಂದ ತಿರುಮಲೆಯವರಿಗ ರಸ್ತೆಯ ಸೌಕರ್ಯಗಳು ಹೇಗೆ ನಿರ್ಮಿ ವಾಗಿದೆಯೋ, ತದ್ವತ್ ತೋರಣಾಲಯದಿಂ (ದೋರ್ನಾಲ) ರಸ್ತೆಯನ್ನು ನಿರ್ಮಿಸಿ ಯಾತ್ರಿ ರಿಗೆ ಶ್ರೀಶೈಲದ ಮಹಾದ್ವಾರದವರೆವಿಗೂ ಸಾಧ ರಣ ೩೨ ಮೈಲು ಮಾರ್ಗವನ್ನು ನಿರ್ಮಿಸಲಾಗಿದ ಈ ಮಾರ್ಗನಿರ್ಮಾಣವು ಯಾತ್ರಿಕರಿಗೆ ಸೌಕರ್ಯ ನ್ನುಂಟುಮಾಡಿದುದಲ್ಲದೆ ಕೆಲವು ಜನಜೀವನದ ದೊಡ್ಡ ಬದಲಾವಣೆಯನ್ನುಂಟುಮಾಡಿ ಅವ ಅಭ್ಯುನ್ನತಿಗೆ ಸಹಕಾರಿಯಾಯಿತು. ತೋರಣಾ ಶ್ರೀಶೈಲದ ರಾಜಮಾರ್ಗವು ಏರ್ಪಾಡಾದುದರಿಂ ಬಸ್ಸುಗಳು ಪ್ರತಿನಿತ್ಯವೂ ಹೋಗಿಬರುತ್ತಿರುವುವು.

## ಪ್ರಧಾನ ದೇವಾಲಯಗಳು

ಶ್ರೀಶೈಲ ಮಹಾಕ್ಷೇತ್ರವೆನ್ನುವುದು ಸಮಸ್ತರಿಗು ವೇದ್ಯವಾದ ವಿಷಯ. ಆದರೆ ಅಲ್ಲಿ ಹಲವು ದೇವ ಲಯಗಳಿರುವವೆಂಬುದು ಆಶ್ಚರ್ಯವೇನಲ್ಲ. ಅ ಗಳಲ್ಲಿ ಶ್ರೀಮಲ್ಲಿಕಾರ್ಜುನದೇವಾಲಯವು, ಶ್ರೀ ಭ್ರಮರಾಂಬಿಕಾದೇವಾಲಯವು ಅತ್ಯಂತ ಮು ವಾದುವು.

ಶ್ರೀ ಭ್ರಮರಾಂಬಿಕೆಯ ದೇವಾಲಯವು ತುಂ ಚಿಕ್ಕದು. ಅಂತರ ಮಂಟಪವು, ಆವರಣವು ಸ ಚಿಕ್ಕದಾಗಿಯೇ ಇರುವುದು. ಇದು ತುಂಬಾ ಪ್ರಾ ನವಾದ ದೇವಾಲಯವಾಗಿರುವುದು. ಇಲ್ಲಿ ಬ್ರಾ ಣರೇ ಅರ್ಚಕರಾಗಿರುವರು.

ಅಂತರಾವರಣದಲ್ಲಿ ಅಂದರೆ ಎರಡನೇ ಆ

ರಣದ ಮಧ್ಯಭಾಗದಲ್ಲಿ ಶ್ರೀ ಮಲ್ಲಿಕಾರ್ಜುನಸ್ವಾಮಿಯ ದೇವಾಲಯವಿರುವುದು. ಪ್ರಾಕಾರದ ಒಳಭಾಗದಲ್ಲಿ ಸುತ್ತಲು ಕೆಲವು ಮಂಟಪಗಳೂ, ಪೂಜಾರಿಗಳ ಮನೆಗಳು ಇರುವುವು. ಮಲ್ಲಿಕಾರ್ಜುನನನ್ನು ಪೂಜಿಸುವವರು ಜಂಗಮರು. ಈ ದೇವಾಲಯವು ಸಹ ಚಿಕ್ಕದಾಗಿಯೇ ಇರುವುದು. ಇದು ಕಲ್ಲಿನಿಂದ ನಿರ್ಮಿಸಲ್ಪಟ್ಟಿರುವುದು.

ಆಲಯಕ್ಕೆ ಪಶ್ಚಿಮ ದಿಕ್ಕಿನಲ್ಲಿ ಸೊಗಸಾದ ಶಿಲಾ ಬಲಿಪೀಠ ಒಂದು ಇರುವುದು. ಉತ್ಸವ ವಿಗ್ರಹಗಳಿಗೆ ಪೂಜೆಗಳು ನೈವೇದ್ಯಗಳು ಇಲ್ಲಿಯೇ ನಡೆಯುವುವು. ಮುಖ ಮಂಟಪಕ್ಕೆ ಮೂಡಲು ಭಾಗದಲ್ಲಿ ಮತ್ತೊಂದು ಶಿವಾಲಯವಿರುವುದು. ಅದನ್ನೇ ಸಹಸ್ರಲಿಂಗ ದೇವಾಲಯವೆಂದು ನುಡಿಯುತ್ತಾರೆ. ಮೂರು ಎಡೆಗಳ ನಾಗಪೀಠದ ಮೇಲೆ ಈ ಲಿಂಗವು ಪ್ರತಿಷ್ಠಿಸಲ್ಪಟ್ಟಿರುವುದು.

ಪ್ರಧಾನ ದೇವಾಲಯಕ್ಕೆ ವಾಯುವ್ಯದಿಗ್ಭಾಗದಲ್ಲಿ ಮೈಲು ದೂರದಲ್ಲಿ, ವಿಭೂತಿಮಠ, ಸಿದ್ಧಮಠ, ನದಿಮಠಗಳು ಘಂಟಾಕರ್ಣಮಠ, ಸಾರಂಗಧರಮಂಟಪ. ಎಂಬ ಐದು ಮಠಗಳಿರುವುವು.

ಇಲ್ಲಿಯ ಶೈವ ಪೀಠಗಳಿಗೆ ಪ್ರತ್ಯೇಕವಾದ ಗೌರವವಿರುವುದು. ಶೈವಪೀಠಾಧಿಪತಿಗಳೂ ಶ್ರೀ ಶ್ರೀ ಜಗದ್ಗುರು ಪಂಡಿತಾರಾಧ್ಯ ಸೂರ್ಯಸಿಂಹಾಸನ ಪೀಠಾಧಿಪತಿಗಳಿಗೆ ಪ್ರತ್ಯೇಕವಾದ ಗೌರವವಿರುವುದು. ಈ ಸ್ವಾಮಿಗಳು ಶ್ರೀಶೈಲದ ಜೀರ್ಣೋದ್ಧಾರದ ಸಂಘದ ಕಾರ್ಯನಿರ್ವಾಹಕರಾಗಿರುವರು.

ಇಲ್ಲಿನ ವಿಗ್ರಹಗಳಲ್ಲಿ ನಟರಾಜಸ್ವಾಮಿಯ ವಿಗ್ರಹವು ಎಷ್ಟೋ ಆಕರ್ಷಣೀಯವಾಗಿದ್ದು ನೋಟಕರ ಭಾವಾನಂದವನ್ನು ದ್ವಿಗುಣಿತವನ್ನಾಗಿ ಮಾಡುತ್ತಲಿದೆ.

## ಉತ್ಸವಗಳು

ಇಲ್ಲಿನ ಪ್ರಧಾನೋತ್ಸವಗಳೆಂದರೆ ಮಕರ ಸಂಕ್ರಾಂತಿ, ಶಿವರಾತ್ರಿ, ಸಂವತ್ಸರಾದಿ ಹಬ್ಬಗಳು ಮಾತ್ರವೆ! ಮತ್ತು ಚೈತ್ರಶುದ್ಧ ಪೂರ್ಣಿಮಾ ದಿನದಲ್ಲಿ ಭ್ರಮರಾಂಬಿಕಾದೇವಿಯ ಸನ್ನಿಧಿಯಲ್ಲಿ ಕುಂಭೋತ್ಸವವು ನಡೆಯುತ್ತದೆ. ಈ ಉತ್ಸವಗಳಿಗೆ ದಕ್ಷಿಣ ದೇಶದವರೆಲ್ಲರೂ ಅಂದರೆ ಆಂಧ್ರರೂ, ಕರ್ನಾಟಕ, ತಮಿಳರು ಮಹಾರಾಷ್ಟ್ರರು ಬರುವರು. ಇಲ್ಲಿ ಶಿವರಾತ್ರಿಯೇ ಅತ್ಯಂತ ಪ್ರಧಾನವಾದ ಉತ್ಸವ. ಮಹಾಶಿವರಾತ್ರಿಯ ಪುಣ್ಯದಿವಸದಲ್ಲಿ ಶ್ರೀಶೈಲ ಮಲ್ಲಿಕಾರ್ಜುನ ಸ್ವಾಮಿಯನ್ನು ಆರಾದನೆಯಿಂದ ಕೈವಲ್ಯವನ್ನು ಸಾಧಿಸಬಹುದೆಂದು ಪುರಾಣಗಳು ಹೇಳುತ್ತಿರುವುವು.

ಒಂದಾನೊಂದು ಕಾಲಕ್ಕೆ ಪ್ರಳಯಕಾಲದಲ್ಲಿ ತನ್ನ ಸಂಹಾರ ಕಾರ್ಯವನ್ನು ನಿರ್ವಹಿಸಿ ಪರಶಿವನು ರಾತ್ರಿಸಮಯದಲ್ಲಿ ಭಯಂಕರವಾಗಿ ತಾಂಡವನಾಟ್ಯ ಮಾಡುತ್ತಿದ್ದನು. ಆಗ ಸರ್ವಮಂಗಳೆ ಎಂಬ ಹೆಸರು ಪಡೆದ ಪಾರ್ವತಿ ಈಶ್ವರನನ್ನು ನೋಡಿ ಜೀವರಾಸಿಗಳು ಪ್ರಪಂಚದಲ್ಲಿರುವ ಅಲ್ಪಕಾಲದಲ್ಲಿ ಲಯಕರ್ತೃವಾದ ಮಹಾದೇವನಾದ ನಿನ್ನನ್ನು ಸೇವಿಸಿ ಪಾಪಗಳನ್ನು ಕಳೆದುಕೊಳ್ಳುವುದಕ್ಕೆ ಒಂದು ಸಮಯವನ್ನು ನಿರ್ಣಯಿಸಬೇಕೆಂದು ಪ್ರಾರ್ಥಿಸಿದಳಂತೆ. ಆ ವಾಕ್ಯಗಳನ್ನಾಲಿಸಿ ಆಕೆಯ ಪ್ರಾರ್ಥನೆಯಂತೆ ಮಹಾದೇವನು ಮಹಾಶಿವರಾತ್ರಿಯ ದಿನ ತನ್ನನ್ನು ಪೂಜಿಸಿದ ಭಕ್ತರಿಗೆ ಯಾವ ವಿಧವಾದ ಉಪದ್ರವಗಳು ಸಂಭವಿಸುವಿದಿಲ್ಲವೆಂತಲೂ ಮುಕ್ತಿ ಸಂಭವಿಸುವುದೆಂತಲೂ ಹೇಳಿದನು. ಮತ್ತೆ ಪ್ರಳಯವು ರಾತ್ರಿ ಹೊತ್ತಿನಲ್ಲಿಯೇ ಸಂಭವಿಸುವುದರಿಂದ ತನ್ನ ಆರಾಧನೆಯನ್ನು ರಾತ್ರಿಯಲ್ಲಿಯೇ ನಡೆಯಿಸಬೇಕೆಂದು ನಿರ್ಣಯಿಸಿದನು. ಆ ಶಿವಾರಾಧನೆಗೆ ಅನುಕೂಲವಾದ ರಾತ್ರಿಯೇ ಮಹಾಶಿವರಾತ್ರಿಯೆಂದು ಪ್ರಸಿದ್ಧವಾಯಿತು. ಅಂತಹ ಪರ್ವದಿನದಲ್ಲಿ ಶ್ರೀಶೈಲದಲ್ಲಿ ಪರ್ವತಲಿಂಗವನ್ನು ಆರಾಧಿಸಿದರೆ ಜನರು ಜನನ ಮರಣಾದಿ ಮಹಾಕ್ಲೇಶಗಳಿಂದ ದೂರವಾಗಿ ಶಿವಸಾಯುಜ್ಯವನ್ನು ಹೊಂದು ವರು. ಚೈತ್ರಶುದ್ಧಪೂರ್ಣಿಮೆಯ ದಿವಸ ಭ್ರಮರಾಂಬಾದೇವಿಯ ಸನ್ನಿಧಾನದಲ್ಲಿ ಕುಂಭೋತ್ಸರ್ವ ಬಲಿಹರಣ ಮುಂತಾದ ಪದ್ಧತಿಯೆಲ್ಲವೂ ನಡೆಯುವುದು.

ಈ ಕ್ಷೇತ್ರದಲ್ಲಿ ಧೂಳಿದರ್ಶನವು ಮುಖ್ಯವಾದುದು. ದೆಟ್ಟಗಳನ್ನು ಹತ್ತಿ ಬಂದ ಯಾತ್ರಿಕರು ಕಾಲುಗಳನ್ನಾದರೂ ತೊಳೆಯದಂತೆ ಧೂಳಿಯಿಂದಿದ್ದ ಪಾದಗಳಿಂದಲೇ ಶ್ರೀ ಮಲ್ಲಿಕಾರ್ಜುನಸ್ವಾಮಿಯ ಗುಡಿಗೆ ಹೋಗಿ ಮೊಳಕಾಲೂರಿ ಶಿವಲಿಂಗದ ಶಿರೋಭಾರವು ಹಣೆಗೆ ತಗಲುವಂತೆ ಸ್ಪರ್ಶಿಸಿ ಸಂತೃಪ್ತರಾಗುತ್ತಾರೆ. ಜಾತಿ ಭೇದವಿಲ್ಲದೆ ಬಂದವರೆಲ್ಲರೂ ಇಲ್ಲಿಯ ಶ್ರೀ ಮಲ್ಲಿಕಾರ್ಜುನ ಲಿಂಗವನ್ನು ಸ್ಪರ್ಶಮಾಡಬಹುದು.

ಸಮಸ್ತ ಬ್ರಹ್ಮಾಂಡ ಬಾಲಕನು ಮಲ್ಲಿಕಾರ್ಜುನನು. ಆದರೆ ಆ ಮಹಾಸ್ವಾಮಿಗೆ ಭಕ್ತರು ನಿವೇದಿಸಿದ ಕಾಣಿಕೆಗಳೇ ಹೊರತು ಮತ್ತೊಂದು ವಿಧವಾದ ಆದಾಯವಿಲ್ಲ.

ಉಮಾದೇವಿಯ ಪತಿಯೂ, ಭಕ್ತರ ಅಭಿಷ್ಟವನ್ನು ಅನುಗ್ರಹಿಸುವವನೂ, ನಿತ್ಯಮಂಗಳ ಸ್ವರೂಪನು, ಪರ್ವತದಲ್ಲಿ ಸಂಸಾರಮಾಡಿಕೊಂಡಿರುವವನು, ಜಡೆಯಲ್ಲಿ ಗಂಗಾದೇವಿಯನ್ನು ಧರಿಸಿರುವವನೂ ಸಮಸ್ತ ಜಗತ್ತಿನ ನಾಥನೂ, ಎಲ್ಲ ರಿಂದಲೂ ಸ್ತುತಿಸಲ್ಪಡುವವನು, ವೇದವೇದ್ಯನೂ, ಮೋಕ್ಷವನ್ನು ಅನುಗ್ರಹಿಸುವವನೂ, ಭಕ್ತರನ್ನು ಅನುಗ್ರಹಿಸುವನೂ, ಮೋಹನಾಕಾರರೂಪನು, ಶಾಂತಿಶುಭಗಳನ್ನು ನೀಡುವವನೂ ಆದ ಶ್ರೀಶೈಲದ ಮಲ್ಲಿಕಾರ್ಜುನನಿಗೆ ಮಂಗಳ.

(ಸಾಧಾರ)



# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

ಭೂಮಿಯ ಒಂದು ವಿಶಿಷ್ಟ ಗುಣ ಇಲ್ಲಿನ ಹಸಿರು. ಗಿಡವಾಗಿ, ಮರವಾಗಿ, ವನವಾಗಿ, ಕಾಡಾಗಿ ಮನುಷ್ಯನ ಜೊತೆಗೇ ಬೆಳೆದು, ಭೂಮಿಯ ಮೇಲಿನ ಮನುಷ್ಯನ ಇರವನ್ನು ಅರ್ಥಪೂರ್ಣ ಆಗಿಸಿರುವುದು ಹಸಿರು. ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿಯ ಸೇವೆಯಲ್ಲಿ ಪರಂಪರೆಯಿಂದ ನೀರುನೆರಳಿನ ತಾಣವಾಗಿ ಪ್ರಸಿದ್ಧಿ ಪಡೆದದ್ದುಂಟು. ಅಂತಹ ಹಿರಿಮೆಯ ಪರಿಸರವನ್ನು ರಕ್ಷಿಸಲು 1981 ರಲ್ಲಿ 25 ಲಕ್ಷ ವೃಕ್ಷಗಳನ್ನು ಬೆಳೆಸುವ ವನಸಂರಕ್ಷಣೆಯ ಕಾರ್ಯಕ್ರಮವನ್ನು ಕೈಗೆತ್ತಿಕೊಳ್ಳಲಾಯಿತು. ಅದರ ಯಶಸ್ವಿ ಅನುಷ್ಠಾನದಿಂದ ಸ್ಫೂರ್ತವಾಗಿ ಹಲವಾರು ವನಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸರ್ವಜನಿಕರನ್ನೂ ಈ ಪರಿಸರ ಪರಿರಕ್ಷಣೆಯ ಪವಿತ್ರಕಾರ್ಯದಲ್ಲಿ ಪಾಲುಗೊಳ್ಳಲು ಯೋಜನೆಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ ಹಲವು ಈ ರೀತಿ ಇವೆ.

## ವೃಕ್ಷ ಸಂವರ್ಧನ ಯೋಜನೆ :

ಒಂದು ಎಕರೆ ಸ್ಥಳದಲ್ಲಿ ರೂ. 15,000 ರೂಪಾಯಿ ನೀಡಿದವರ ಹೆಸರಿನಲ್ಲಿ ಉಪವನವನ್ನು ಬೆಳೆಸಲಾಗುವುದು. ದಾನಿಗಳಿಗೆ ಹತ್ತು ವರ್ಷಗಳಕಾಲ ಪ್ರತಿವರ್ಷದಲ್ಲಿ ಎರಡು ದಿನ ತಿರುಮಲೆಯಲ್ಲಿ ಉಚಿತ ವಸತಿ ನೀಡಿ ಅವರಿಗೆ ಈ ಕಾಲದಲ್ಲಿ 5 ಮಂದಿಗೆ ಉಚಿತ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವೃಕ್ಷ ಪ್ರಸಾದ :

ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಸಸಿಗಳನ್ನು ಬೆಳೆಸುವ ಈ ಯೋಜನೆಯಲ್ಲಿ ದಾನಿಗಳ ಹೆಸರಿನಲ್ಲಿ ಪ್ರತಿವರ್ಷವೂ ನೂರು ಗಿಡಗಳನ್ನು ವಿತರಣೆ ಮಾಡಲಾಗುವುದು. ಹತ್ತು ಸಾವಿರ ರೂಪಾಯಿಗಳ ದಾನದಿಂದ ಈ ಯೋಜನೆಯಲ್ಲಿ ಪಾಲುಗೊಳ್ಳುವ ದಾನಿಗಳಿಗೆ ಪ್ರತಿವರ್ಷವೂ ಎರಡುದಿನ ತಿರುಮಲೆಯಲ್ಲಿ ಉಚಿತ ವಸತಿ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ಸ್ಮಾರಕ ವನ :

ಒಂದೆಡೆ ಹತ್ತು ಮರಗಳನ್ನು 5 ವರ್ಷ ನೋಡಿಕೊಳ್ಳುವ ಈ ಯೋಜನೆಯಲ್ಲಿ 2000 ರೂ. ಗಳನ್ನು ನೀಡುವ ದಾನಿಗಳ ಹೆಸರನ್ನೆ ಈ ತರುಸಮೂಹಕ್ಕೆ ನೀಡಲಾಗುವುದು. ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವನಸಂರಕ್ಷಣ ಭಾಗಸ್ವಾಮ್ಯ :

ಏಳು ಬೆಟ್ಟಗಳ ವನಾಚ್ಛಾದನೆಯನ್ನು ಸಂರಕ್ಷಿಸುವ ಉದ್ದೇಶದ ಈ ಯೋಜನೆಯಲ್ಲಿ 1000 ರೂ.ಗಳ ದಾನದಿಂದ ಪಾಲುಗೊಳ್ಳಬಹುದು. ದಾನಿಗಳ ಹೆಸರನ್ನು ಮುಖ್ಯವಾಗಿ ಪ್ರದರ್ಶಿಸಲಾಗುವುದು. ಅವರ ಐದು ಮಂದಿಗೆ ಒಂದು ವರ್ಷ ವಿಶೇಷ ಪ್ರವೇಶದಲ್ಲಿ ದರ್ಶನಾವಕಾಶ ನೀಡಲಾಗುವುದು.

## ಅಧ್ಯಯನ ವನಗಳು :

ಸಸ್ಯವನದಲ್ಲಿ ಒಂದು ಬಗೆಯ ಸಸ್ಯದ ವಿಶೇಷ ಆರೈಕೆ ಮಾಡಲಾಗುವುದು. ಸಸ್ಯದ ಬಳಿ ದಾನಿಯ ಹೆಸರಿನ ಫಲಕವಿಡಲಾಗುವುದು. ಇದಕ್ಕೆ ದಾನ ನೀಡಬೇಕಾದ ಮೊತ್ತ ರೂ. 500/--

## ವೃಕ್ಷ ದತ್ತತೆ :

ತಿರುಮಲೆಯ ಹಾದಿಯಲ್ಲೂ ಬೀದಿಬದಿಗಳಲ್ಲೂ ವೃಕ್ಷಗಳನ್ನು ಬೆಳೆಸುವ ಈ ಯೋಜನೆಯಲ್ಲಿ 250 ರೂ. ನೀಡಿದವರ ಹೆಸರನ್ನು ಮರದ ಬಳಿ ಫಲಕದಲ್ಲಿ ಪ್ರದರ್ಶಿಸಲಾಗುವುದು.

ತಿರುಮಲೆಯ ಅರಣ್ಯವು ನಮ್ಮ ಪರಂಪರೆಯ ಕೊಡುಗೆಯಾಗಿದ್ದು ಅದನ್ನು ರಕ್ಷಿಸಿ ಮುಂದಿನ ಪೀಳಿಗೆಗೆ ತಲುಪಿಸುವ.

ದಶಕೂಪ ಸಮೋವಾಪಿ ದಶವಾಪಿ ಸಮೋ ಹ್ರದ
ದಶ ಹ್ರದ ಸಮಃ ಪುತ್ರ ದಶಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ ಹತ್ತು ಗಂಡುಮಕ್ಕಳು ಒಂದು ತರುವಿಗೂ ಸಮ.

ದಯವಿಟ್ಟು ಈ ಉದಾತ್ತ ಯೋಜನೆಗಳಲ್ಲಿ ಭಾಗಿಗಳಾಗಬೇಕೆಂದು ಭಕ್ತ ಬಂಧುಗಳಲ್ಲಿ ವಿನಂತಿಸಲಾಗಿದೆ.

ತಮ್ಮ ದಾನಗಳನ್ನು ಕಳುಹಿಸಬೇಕಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇವಸ್ಥಾನಗಳು,

ತಿರುಪತಿ -- 517 507.

# ಜೈಮಿನಿ ಮಹರ್ಷಿ

---ಕಂದಾಡ್ಯೆ ಕೇಶರ್ವ.

ಮಹಾಪುರುಷ ಚರಿತ್ರೆ ಬಹಳ ವಿಚಿತ್ರವಾಗಿರುತ್ತೆ. ನಮ್ಮ ಹಿಂದಿನ ಮಹರ್ಷಿಗಳು ನಮಗೆ ಶ್ರೇಷ್ಠವಾದ ಗ್ರಂಥ ಭಂಡಾರಗಳನ್ನು ನೀಡಿದ್ದರೂ ತಮ್ಮ ಬಗ್ಗೆ ಹೆಚ್ಚಿಗೆ ತಮ್ಮ ಗ್ರಂಥಗಳಲ್ಲಿ ಹೇಳಿಲ್ಲ. ಯಾವಫ ಲಾಪೇಕ್ಷೆಯಿಲ್ಲದೆ ಲೋಕಹಿತಕ್ಕಾಗಿ ಧರ್ಮವನ್ನು ಪುರುಷಾರ್ಥಕ್ಕಾಗಿ ಸ್ಮೃತಿ-- ಶ್ರುತಿ, ಪುರಾಣಗಳನ್ನು ಬರೆದು ಮಾನವರಿಗೆ ಜ್ಞಾನ ಭೀಕ್ಷೆಯನ್ನು ನೀಡಿದ್ದಾರೆ. ಅಂತಹ ಮಹಾ ಪುರುಷರಲ್ಲಿ ಜೈಮಿನಿ ಮಹರ್ಷಿಗಳು ಅಗ್ರಗಣ್ಯರು (ಶ್ರೇಷ್ಠರು). ಇವರ ಜನನ ವಿಷಯ ಅವರ ಮಾತಾ ಪಿತೃಗಳ ಸಂಗತಿ ನಮಗೆ ಹೆಚ್ಚಿಗೆ ತಿಳಿಯವು. ಜೈಮಿನಿ ಮಹರ್ಷಿ ವ್ಯಾಸಮಹರ್ಷಿಯಲ್ಲಿ ಸಾಮವೇದವನ್ನು ಸಾಂಗೋಪಾಂಗವಾಗಿ ಅಧ್ಯಯನ ಮಾಡಿದನೆಂದು ತಿಳಿದು ಬರುತ್ತದೆ. ಈತನು ಕುತ್ಸಮಹರ್ಷಿಯ ವಂಶವನು.

## ಸಾಮವೇದ ಪ್ರಚಾರಕ

ಸೃಷ್ಟಿ ಸಮಯದಲ್ಲಿ ಬ್ರಹ್ಮನ ಹೃದಯ ಕಮಲದಲ್ಲಿ ಒಂದು ಸಂಪೂರ್ಣ ಜಗತ್ತಿನ ವಾಕ್ಸಂಪತ್ತಿನ ನಾದವು ಹೊರಹೊಮ್ಮಿತ್ತು. ಅದೇ ಓಂ ಎಂಬುವ ಪ್ರಣವನಾದ. ಇದರ ಮಹಿಮೆ ಜಗದ್ವ್ಯಾಪಕವಾಗಿದೆ. ವೇದಗಳಲ್ಲಿ, ಉಪನಿಷತ್ತುಗಳಲ್ಲಿ ದರ್ಶನಗಳಲ್ಲಿ ಓಂಕಾರ ಮಹಿಮೆ ಅಪಾರವಾಗಿ ಬರುತ್ತವೆ. ಋಗ್ವೇದದಲ್ಲಿ ಓ ಮಾನಮಾಪೊ -- ಯಜ್ಞಸ್ಯ ಶಾಕೇ ಪರಮೇ ವ್ಯೋಮನ್ ಎಂಬುವುದಾಗಿ ಓಂ ಎಂಬುವ ಪರಮಾತ್ಮನು ಸರ್ವರಕ್ಷಕನು ಯಜುರ್ವೇದದಲ್ಲಿ "ಓಂ ಕ್ರತೋಸ್ಮರ" --ಜೀವವೇ ಓಂ ಎಂದು ಸ್ಮರಿಸು. ಸಾಮವೇದದಲ್ಲಿ " ಓಂ ಸ್ವಸ್ತಿನೋ ಬೃಹಸ್ಪತಿರ್ದಧಾತು" ಓಂ ಎಂಬುವ ಸರ್ವರಕ್ಷಕನೂ ಜಗತ್ತಿನಸ್ವಾಮಿಯಾದ ಭಗವಂತನು ನಮಗೆ ಕಲ್ಯಾಣವನ್ನು ನೀಡಲಿ! ಎಂಬುವುದಾಗಿ ಓಂಕಾರದ ಬಗ್ಗೆ ಉಲ್ಲೇಖನಗಳಿವೆ. ಹೀಗೆ ಸರ್ವಮಂತ್ರ ಸರ್ವ ಉಪನಿಷದ್ ಮೂಲಭೂತವಾಗಿ ಓಂಕಾರವು ವೇದಮಾತೆಯೆಂದು ಪುರಸ್ಕರಿಸಲ್ಪಟ್ಟಿತು. ಅನಂತವಾದ ಅಪೌರುಷೇಯವಾದ ವೇದಗಳನ್ನು ದ್ವಾಪರಯುಗದಲ್ಲಿ ಭಗವಂತರಾದ ವ್ಯಾಸಮಹರ್ಷಿಗಳು ವೇದರಾಶಿಯನ್ನು ನಾಲ್ಕು ಭಾಗವಾಗಿ ವಿಂಗಡಿಸಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದಗಳೆಂದು ತನ್ನ ಶಿಷ್ಯರಾದ ಕ್ರಮವಾಗಿ ಪೈಲಮುನಿ, ವೈಶಂಪಾಯನ, ಜೈಮಿನಿ, ಸುಮಂತು ಎಂಬುವ ಶಿಷ್ಯರಿಗೆ ಉಪದೇಶಿಸಿದರು. ಇವರು ಈ ವೇದಗಳಿಗೆ ಸೂತ್ರಗಳನ್ನು ಬರೆದರು. ವೇದ ರಾಶಿಗಳಿಗೆ ಶ್ರುತಿ ಅಮ್ನಾಯ ಎಂಬುವುದಾಗಿಯೂ ಕರೆಯುತ್ತಾರೆ. ಪ್ರತಿಯೊಂದು ವೇದವನ್ನೂ ೧) ಮಂತ್ರಸಂಹಿತೆ ಅಥವಾ ಸ್ತುತಿ, ೨) ಬ್ರಾಹ್ಮಣ, ೩) ಆರಣ್ಯಕ, ೪) ಉಪನಿಷತ್ತುಗಳು ಎಂಬುವುದಾಗಿ ನಾಲ್ಕು ಒಳ ವಿಭಾಗಗಳನ್ನಾಗಿ ವಿಂಗಡಿಸಿದ್ದಾರೆ. ವೇದಗಳು, ಕರ್ಮಕಾಂಡ, ಉಪಾಸನಾ ಕಾಂಡ ಮತ್ತು ಜ್ಞಾನಕಾಂಡ ಎಂಬುವುದಾಗಿ ವಿಷಯಾನುಸಾರವಾಗಿ ವಿಭಾಗಿಸಲ್ಪಟ್ಟಿವೆ.

ವೇದಗಳ ಮಂತ್ರಭಾಗ ಮತ್ತು ಬ್ರಾಹ್ಮಣ ಭಾಗಗಳು ಕರ್ಮಕಾಂಡಕ್ಕೆ ಸೇರಿವೆ, ವೈದಿಕ ದೇವತೆಗಳಾದ ಅಗ್ನಿ, ವರುಣ, ಇಂದ್ರ, ಮರುತ್ ದೇವತೆಗಳನ್ನು ಸ್ತುತಿಸುವ ಮಂತ್ರ ವಿಭಾಗವೇ ಮಂತ್ರ ಸಂಹಿತೆ. ಮನುಷ್ಯನ ಶ್ರೇಯಸ್ಸಿಗೆ ಬೇಕಾದ ಯಜ್ಞಯಾಗಾದಿಗಳ ವಿವರಣೆ, ವ್ಯಾಖ್ಯಾನಗಳೇ ಬ್ರಾಹ್ಮಣಗಳು. ಋಗ್ವೇದದಲ್ಲಿ ಐತರೇಯ ಮತ್ತು ಶಾಂಖಾಯನ ಎಂಬ ಎರಡು ಬ್ರಾಹ್ಮಣಗಳಿವೆ. ಕೃಷ್ಣ ಯಜುರ್ವೇದದಲ್ಲಿ ತೈತ್ತರೀಯ ಮತ್ತು ಮೈತ್ರಾಯಣೀ ಬ್ರಾಹ್ಮಣವು, ಶುಕ್ಲ ಯಜುರ್ವೇದದಲ್ಲಿ ಶತಪಥ ಬ್ರಾಹ್ಮಣವೂ, ಸಾಮವೇದದಲ್ಲಿ ಕಾಂಡ್ಯ ಷಡ್ವಿಂಶ, ಛಾಂದೋಗ್ಯ ಅದ್ಭುತ, ಅರ್ಷೇಯ ಮತ್ತು ಉಪನಿಷತ್ ಬ್ರಾಹ್ಮಣಗಳಿವೆ. ಅಥರ್ವಣವೇದದಲ್ಲಿ ಗೋಪಥ ಬ್ರಾಹ್ಮಣವು ಪ್ರಸಿದ್ಧವಾಗಿವೆ.

ಉಪಾಸನಾಕಾಂಡವು ಹಲವಾರು ಉಪಾಸನಾ ಮಂತ್ರವಿಭಾಗ. ಇದನ್ನೇ ಅರಣ್ಯಕ ಎಂಬುವುದಾಗಿ ಕರೆಯುತ್ತಾರೆ. ಉಪನಿಷತ್‌ಗಳೇ ಜ್ಞಾನ ಕಾಂಡ ಅಥವಾ ವೇದಾಂತವೆಂದು ಕರೆಯಲ್ಪಟ್ಟಿವೆ. ಜೈಮಿನಿ ಋಷಿಯು ಅಧ್ಯಯನಮಾಡಿದ ಸಾಮವೇದವು ಗಾನರೂಪವಾಗಿ ಸ್ವರಲಯ ಸಹಿತ, ಛಂದೋಬದ್ಧವಾಗಿ ಹಾಡುವ ಸುಮಧುರ ಮಂತ್ರಗಳ ಸಂಯೋಜನ ಸಮೂಹವಾಗಿವೆ. ಯಜ್ಞಕಾಲದಲ್ಲಿ ಮಂತ್ರಗಳನ್ನು ಉಚ್ಚಸ್ವರದಲ್ಲಿ ಉದ್ಗಾತೃ ವಿಶಿಷ್ಟವಾದ ಸ್ವರದಲ್ಲಿ ಹಾಡುವ ಮಂತ್ರಗಳು ಸಾಮವೇದದಲ್ಲಿವೆ. ಜೈಮಿನಿ ಮಹರ್ಷಿ ತಾನು ಕಲಿತ ಸಾಮವೇದವನ್ನು ತನ್ನ ಮಗನಾದ ಸುಮಂತುವಿಗೆ ಉಪದೇಶಿಸಿದನು. ಆತನು ಸುಕರ್ಮನಿಗೆ, ಸುಕರ್ಮನು ಸಾಮವೇದವನ್ನು ಸಹಸ್ರಶಾಖೆಗಳಾಗಿ ವಿಭಜನೆಮಾಡಿ ತನ್ನ ಮಗನಾದ ಪೌಷ್ಯಂಜನಿಗೆ ಹಾಗೂ ಕೋಸಲ ಹಿರಣ್ಯನಾಭನಿಗೆ ಉಪದೇಶಿಸಿದನು. ಸಾಮವೇದದಲ್ಲಿ ಗ್ರಾಮಗೇಯ -- ಊಹ -- ವೂಹ್ಯ ಮತ್ತು ಅರಣ್ಯಗಾನ ಎಂಬುವ ಸಂಗೀತ ಶಾಸ್ತ್ರದ ಸಪ್ತ ಸ್ವರಗಳ ಪ್ರಯೋಗಗಳು ಇವೆ. ಸಾಮವೇದದಲ್ಲಿ ೧೫ ಭಾಗಗಳು, ೩೨ ಅಧ್ಯಾಯಗಳಿವೆ. ಸಾಮವೇದದಲ್ಲಿ ೧೧ ದೇವತೆಗಳನ್ನು ಪ್ರಾರ್ಥಿಸುವ ಮಂತ್ರಗಳಿವೆ. ಈ ಮಂತ್ರಗಳನ್ನು ಅನುಷ್ಠಾನ ಮಾಡಿರುವ ಋಷಿಗಳು ೧೮೫. ಈ ಮಂತ್ರಗಳಲ್ಲಿ ಉಪಯೋಗಿಸಿರುವ ಛಂದಸ್ಸುಗಳು ೧೧. ಋಗ್ವೇದದ ಕೆಲವುಮಂತ್ರಗಳೂ ಕೃಷ್ಣ, ಶುಕ್ಲ ಯಜುರ್ವೇದಗಳ ಕೆಲವು ಮಂತ್ರಗಳು ಸಾಮವೇದದಲ್ಲಿ ಸೇರಿವೆ.

"ಅನಂತಾ ವೈ ವೇದಾಃ" ಎಂಬಂತೆ ಅಪೌರುಷೇಯವಾದ ಪರಮಾತ್ಮನನ್ನು ಸ್ತುತಿಸುವ ಆ ವೇದಗಳ ಮಂತ್ರಗಳು ಸಾಮವೇದದಲ್ಲಿ ಸೇರಿರುವುದು ಸ್ಪಷ್ಟ. ಸಾಮವೇದಕ್ಕೆ ಶ್ರೀ ವಿದ್ಯಾರಣ್ಯರು ಪ್ರತ್ಯೇಕವಾಗಿ ಭಾಷ್ಯವನ್ನು ಬರೆದಿದ್ದಾರೆ. ಭಗವಂತನು ಸಾಮಗಾನಲೋಲ. ಸ್ತುತಿಸುವವರಿಗೆ ಸುಲಭ ಲಭ್ಯನಲ್ಲವೆ? ನಾರದ ಶಿಕ್ಷದಲ್ಲಿ ಸಾಮಗಾನವನ್ನು ಕುರಿತು--

"ಸಾಮವೇದೇತು ವಕ್ಷ್ಯಾಮಿ
ಸ್ವರಾಣಾಂ ಚರಿತಂ ಯಥಾ
ತಾನರಾಗ ಸ್ವರಗ್ರಾಮ
ಮೂರ್ಛನಾನಾಂತು ಲಕ್ಷಣಂ

ಇದರ ಅರ್ಥ ತಾನರಾಗ, ಸ್ವರಗ್ರಾಮ, ಮೂರ್ಛನ ಎಂಬುವುವು ಸಾಮವೇದದ ಸ್ವರಗಳ ಲಕ್ಷಣವೆಂದು. ಮತ್ತೆ--

"ಸಪ್ತ ಸ್ವರಾಃ ತ್ರಯೋ ಗ್ರಾಮೋ
ಮೂರ್ಛನಾಸ್ವೇಕ ವಿಂಶತಿಃ
ತಾನಾ ಏಕೋನ ಪಂಚಾಶತ್
ಇತ್ಯೇತತ್ ಸ್ವರ ಮಂಡಲಂ

ಷಡ್ಜಶ್ಚ ಋಷಭಶ್ಚೈವ
ಗಾಂಧಾರೋ ಮಧ್ಯಮಸ್ತಥಾ
ಪಂಚಮೋ ಧೈವತಶ್ಚೈವ
ನಿಷಾದಸ್ಸಪ್ತಮಸ್ಸ್ವರಃ"

--ಎಂಬುವುದಾಗಿ ತಿಳಿಸಿರುತ್ತೆ

ಏಳು ಸ್ವರ, ಮೂರು ಗ್ರಾಮ, ೨೦ ಮೂರ್ಛನೆಗಳು, ೪೯ ತಾನಗಳು. ಅವುಗಳಲ್ಲಿ ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ನಿಷಾದ ಎಂಬುವವುಗಳು ಸ್ವರಗಳು. ನಾರದಾದಿ ಶಿಕ್ಷಾ ವೇದಾಂಗದಲ್ಲಿ ಹೇಳಿವೆ. ಇವುಗಳನ್ನೇ ಸಂಗೀತ ಶಾಸ್ತ್ರದ ಪಾರಿಜಾತಾದಿಗಳಲ್ಲೂ ಹೇಳಿರುವುದರಿಂದ ಸಂಗೀತಕ್ಕೆ ಮೊದಲ ಉಗಮಸ್ಥಾನ ಸಾಮವೇದ. ಇದರ ಪ್ರಚಾರಕ ಜೈಮಿನಿ ಋಷಿಗೆ ಎಲ್ಲಾ ಸಂಗೀತಪ್ರಿಯರು ಚಿರಋಣಿಗಳು. ಸಾಮವೇದಕ್ಕೆ ಗಾಂಧರ್ವ ವೇದವೆಂದೂ ಸಂಗೀತ ಶಾಸ್ತ್ರ ಉಪವೇದವೆಂದು ಪರಿಗಣಿಸಲ್ಪಟ್ಟಿದೆ. ಸಾಮವೇದದ ಮೊದಲನೆಯ ಮಂತ್ರವು ಚಂದ ಆರ್ಚಿಕ, ಆಗ್ನೇಯ ಪರ್ವ (ಕಾಂಡ).

ಇದಕ್ಕೆ ಭರದ್ವಾಜ ಋಷಿ, ಗಾಯತ್ರೀ ಛಂದಸ್ಸು, ಅಗ್ನಿ ದೇವತೆ ಮಂತ್ರ--

"ಅಗ್ನ ಆಯಾಹಿ ವೀತಯೇ
ಗೃಣಾನೋ ಹವ್ಯದಾತಯೇ
ನಿ ಹೋತಾ ಸತ್ಸಿ ಬರ್ಹಿಷಿ"

ಓ ಅಗ್ನಿಯೇ ನೀನು ಸ್ತುತಿಸಲ್ಪಟ್ಟ ಪುರೋಡಾಶಾದಿ ಹವಿಸ್ಸುಗಳನ್ನು ಭಕ್ಷಿಸಲು ದೇವತೆಗಳಿಗೆ ಹವಿಸ್ಸನ್ನು ನೀಡಲು ಬಾ. ಬಂದ ದೇವತೆಗಳನ್ನು ಆಹ್ವಾನಿಸಿ ಹರಡಿರುವ ದರ್ಭೆಗಳ ಮೇಲೆ ಕುಳಿತುಕೋ.

ಮಹರ್ಷಿಗಳು ತಪಸ್ಸು ಮಾಡುತ್ತಿರುವಾಗ ಅವರಿಗೆ ದಿವ್ಯ ಮಂತ್ರಗಳು ಕೇಳಿಸಿದಾಗ ಅವುಗಳನ್ನು ಕೇಳಿ ಆನಂದಿಸಿ ಅವುಗಳನ್ನು ಗಾನರೂಪವಾಗಿ ಹಾಡಿದಾಗ ಅದರ ಪ್ರಯೋಜನ ಲೋಕಹಿತಕ್ಕಾಗಿ 'ಶಿಶುರ್ವೇತ್ತಿ ಪಶುರ್ವೇತ್ತಿ, ವೇತ್ತಿಗಾನರಸಂ ಫಣಿಃ' ಎಂಬುವ ನಾಣ್ಣುಡಿಯಂತೆ ನಾದಮಾಧುರ್ಯಕ್ಕೆ ಪರವಶವಾಗುವ ಶಿಶು ಪಶು ಫಣಿ ಸಾಮಾನ್ಯ ಧರ್ಮದ ಮಹಿಮೆ ಅರಿತ ಋಷಿಗಳು ಸಾಮವೇದವನ್ನು ನಮಗೆ ನೀಡಿದ್ದಾರೆ. ಅದರ ಉಪಕಾರ ಸ್ಮರಣೆ ಜೈಮಿನಿ ಋಷಿಗೆ ಸೇರಬೇಕು. ವೇದಮಂತ್ರಗಳನ್ನು ಸ್ವಾನುಭೂತಿಯಿಂದ ಸಮನ್ವಯ ದೃಷ್ಟಿಯಿಂದ ಮಂತ್ರ ದ್ರಷ್ಟಾರರಾದ ಜೈಮಿನಿ ಋಷಿಗಳು ಮಾನವಕುಲದ ಉದ್ಧಾರಕ್ಕೆ ನೀಡಿದ, ಅವಾಙ್ಮಾನಸ ಗೋಚರನಾದ ಪರಾಮಾತ್ಮನನ್ನು ಯೋಗಸಮಾಧಿಯಿಂದ ನೋಡಿದ ಮಹರ್ಷಿಗಳು. ದಯಾಮಯನಾದ ಅವನನ್ನು ಇಂದ್ರರೂಪನಾಗಿ ನೋಡಿದರು. ಸಾಮವೇದದ ೨ನೇ ಅಧ್ಯಾಯ ೭೦೩ ಮಂತ್ರ--

"ಪುರುಹೋತಂ ಪುರುಹೂತಂ ಗಾಥಾ ನ್ಯಾಗಂ
ಸಸಶ್ರುತಂ ಇಂದ್ರ ಇತಿ ಬ್ರವೀತನ"

ಎಂಬುವುದಾಗಿ ಇಂದ್ರನನ್ನು ಕುರಿತು ಮುಂದಿನ ಮಂತ್ರಗಳು ಆತನನ್ನು ಸರ್ವ ಬಂಧುವೆಂದು, ಪ್ರಭುವೆಂದು, ತಂದೆಯೆಂದು, ಪೋಷಕನೆಂದು ಸಕಲ ಸಂಪದಗಳನ್ನು ಕೊಡುವ ಅಧಿಕಾರಿ, ಪ್ರಿಯನು ಎಂಬುವುದಾಗಿ ಸ್ತುತಿಸಲ್ಪಟ್ಟಿವೆ. ಇಂದ್ರನನ್ನು ಮುಂದಿನ ಹಲವಾರು ಮಂತ್ರಗಳಲ್ಲಿ ವೈದ್ಯನೆಂದು, ಸರ್ವಜ್ಞನೆಂದು ಸತ್ಯಸ್ವರೂಪಿ, ಧನವನ್ನು ನೀಡುವವನು, ಅಜಾತ ಶತ್ರುವೆಂದು ಸರ್ವನಿಯಾಮಕನು, ಫಲಾಪೇಕ್ಷ ರಹಿತನು, ಇಂದ್ರನು ಎಂದು ಹೇಳಿ ಅನುಗ್ರಹವನ್ನು ಪಡೆದವರು ಧನ ಕನಕ ವಸ್ತ್ರ ವಾಹನ, ಆರೋಗ್ಯವನ್ನು ಪಡೆಯುವರೆಂದೂ ಅವನೇ ಸೂರ್ಯನು, ದೃಷ್ಟಿಗೋಚರಕ್ಕೆ ಅಧಿನಾಥನು, ಸಕಲ ಜೀವರಾಶಿಗೆ ಪೋಷಕನು, ಮೇಘದಿಂದ ವರ್ಷವನ್ನು ಸುರಿಸುವವನು, ರಾತ್ರಿಯಲ್ಲಿ ಚಂದ್ರನಿಗೆ ತೇಜಸ್ಸು ನೀಡುವವ, ಸರ್ವಶಕ್ತಿಗೆ ಆಧಾರಸ್ತಂಭನಾದ ಸೂರ್ಯನನ್ನು ಇಂದ್ರನ ರೂಪದಲ್ಲಿ ಭಜಿಸಿ ಅವನ ಅಂತರ್ಗತನಾದ ಪರಮಾತ್ಮನನ್ನು ಆರಾಧಿಸಿದರು.

ಅಂತಹ ಪರಮಾತ್ಮನನ್ನು "ಯಶ್ಚಾಸಾವಾದಿತ್ಯೇ" "ಸ ಏಕಃ" ಎಂಬುವ ತೈತ್ತರೀಯ ಶ್ರುತಿಯ ಆಧಾರದಂತೆ ಆ ಪರಮಾತ್ಮನನ್ನು ಸಗುಣ, ನಿರ್ಗುಣ ಉಪಾಸನದಿಂದ ಭಜಿಸಿದರು. ಹಾಗೆಯೇ, ಅಗ್ನಿ, ವರುಣ, ಸೋಮ, ಮೊದಲಾದ ಹೆಸರುಗಳಿಂದ ಭಜಿಸಿದರು. ಈ ದೇವತೆಗಳಲ್ಲಿ ಅಂತರ್ಗತನಾದವನು ಪರತತ್ವನಾದ ವಿಷ್ಣುವೇ ಎಂಬ ಭಾವದಿಂದ ಸಾಮಗಾನದಿಂದ ಹಾಡಿದರು. ಅಗ್ನಿಯನ್ನು ಕುರಿತು ಸಾಮವೇದದ ಮೂರನೆಯ ಮಂತ್ರ--

"ಅಗ್ನಿಂ ದೂತಂ ವೃಣೀಮಹೇ
ಹೋತಾರಂ ವಿಶ್ವ ವೇದಸಂ
ಅಸ್ಯ ಯಜ್ಞಸ್ಯ ಸುಕ್ರತುಂ"

ದೇವತೆಗಳಿಗೆ ದೂತನಾದವನು, ಸಮಸ್ತವನ್ನು ಅರಿತವನು, ಸಕಲ ಸಂಪತ್ತುಗಳನ್ನು ನೀಡುವವನು ಆದ ಅಗ್ನಿಯನ್ನು ಸೇವಿಸುತ್ತಿರುವೆವು. ಈ ಯಜ್ಞವನ್ನು ನೆರವೇರಿಸುವವನು ನೀನು; ಒಳ್ಳೆಯ ಜ್ಞಾನವನ್ನು ಹೊಂದಿರುವನಾದ ನಿನ್ನನ್ನು -- ಅಗ್ನಿಯೇ -- ಸ್ತುತಿಸುವೆವು. ಸೂರ್ಯನು ಇಂದ್ರನ ಪ್ರತಿನಿಧಿ ಸ್ಥಿರಚರ ಜಗತ್ತಿಗೆ ಜೀವಾತ್ಮ ವೇದವಾಕ್ಕು ಸೂರ್ಯನಿಗೆ ನಮನ. ಸೂರ್ಯನಿಗೆ ಏಳು ಕುದುರೆಗಳು ೩೦ ಅವಯವಗಳು.

ಸೂರ್ಯನನ್ನು ಕುರಿತು ಸಾಮವೇದದ ೩೧ ನೇ ಮಂತ್ರ---

"ಉದುತ್ಯಂ ಜಾತ ವೇದಸಂ
ದೇವಂ ವಹಂತಿ ಕೇತವಃ
ದೃಶೇ ವಿಶ್ವಾಯ ಸೂರ್ಯಂ"

ಇದನ್ನು ಪ್ರತಿಯೊಬ್ಬರು ಸಂಧ್ಯಾವಂದನೆ ಕಾಲದಲ್ಲಿ ಪಠಿಸುತ್ತಾರೆ

ಸಾಮವೇದದಲ್ಲಿ ಸೋಮರಸದ ಬಗ್ಗೆ, ಸೋಮಲತೆಯ ಬಗ್ಗೆ ವಿಶದವಾಗಿ ವರ್ಣಿಸಲ್ಪಟ್ಟಿದೆ. ಪ್ರಾಚೀನಕಾಲದಲ್ಲಿ ಸೋಮಲತೆಯನ್ನು ಪ್ರತಿಯೊಬ್ಬರು ತಮ್ಮ ಅಂಗಳದಲ್ಲಿ ಬೆಳೆಸುತ್ತಿದ್ದರು. ಸೋಮಲತೆಯನ್ನು ರಾತ್ರಿಯಲ್ಲಿ ಕಿತ್ತು ಅದನ್ನು ಕುಟ್ಟಿ ರಸ ತೆಗೆದು ವಸ್ತ್ರದಿಂದ ಶೋಧಿಸಿ, ಹಸುವಿನ ಹಾಲಿನಿಂದ, ಜೇನುತುಪ್ಪದಿಂದ ಕೆಲವು ದಿವಸಗಳ ಹಿಂಡಿಯಲ್ಲಿ ಬೆರೆಸಿ ಪಾಕವಾದಾಗ ವಿಚಿತ್ರ ಬಣ್ಣಗಳು ಬಂದಾಗ ಅದನ್ನು ಸೇವಿಸಿದರೆ ಪಾಪಹರಣ. ಕಾಂತಿಯನ್ನು ಆರೋಗ್ಯವನ್ನು ನೀಡಬಲ್ಲದೆಂದು ಉಲ್ಲೇಖವಿದೆ. ಸತ್ಯಸ್ವರೂಪವಾದುದು. ಸರ್ವದರ್ಶಿ, ಮುಂಚೆ ಸಿಂಧುಮಾತರಂ ಎಂಬುದಂತೆ ಸಿಂಧು ದೇಶದಲ್ಲಿ ಈ ಸೋಮಲತೆ ಬೆಳೆಯಲಾಯಿತು. ಈ ಸೋಮರಸವನ್ನು ದೇವತೆಗಳು ಅಮೃತವೆಂದು ಕುಡಿದು ಮೃತ್ಯುವನ್ನು ಗೆದ್ದರು. ಇದನ್ನೇ ಅವರು ಪರಮಾನಂದದಸ್ಥಿತಿಯುಳ್ಳ ಪರಬ್ರಹ್ಮನೆಂದೇ ಭಾವಿಸಿದರು. ಅದನ್ನು ಸುಪರ್ಣವೆಂಬ ಪಕ್ಷಿ ಸ್ವರ್ಗದಿಂದ ತಂದಿರುವಂತೆ ಸಾಮವೇದ ಸಾರುತ್ತೆ. ಸೂರ್ಯನ ಕಿರಣಗಳಿಗೆ ಸುಪರ್ಣವೆಂದೇ ನಾಮ.

"ಅತಸ್ತ್ವಾ ರಯಿಭ್ಯಯ
ಪ್ರಾಚಾನಗಂ ಸುಕ್ರತೋ ದಿವಃ
ಸುಪರ್ಣೋ ಅವ್ಯಥೀಭರತ್"

(322)

ಎಂಬುದ ಮಂತ್ರದಂತೆ ಸೋಮವನ್ನು ದ್ಯುಲೋಕದಿಂದ ಗರುತ್ಮಂತನಾದ ಸುಪರ್ಣ ಪಕ್ಷಿಯು ಭೂಲೋಕಕ್ಕೆ ತಂದಿರುತ್ತೆ ಎಂಬುದ್ದಾಗಿ ತಿಳಿಸಲ್ಪಟ್ಟಿದೆ. ಸಾಮವೇದದಲ್ಲಿ ಅತಿಥಿ ಸತ್ಕಾರ ಮಹಿಮೆ, ಸೂರ್ಯೋದಯ ದರ್ಶನ, ಉದಕದಿಂದ ಪರಿಹಾರವಾಗುವ ರೋಗಗಳು; ಪ್ರಕೃತಿ ವೈದ್ಯ, ದಾನ ಮಹಿಮೆ, ಅಗ್ನಿ ಶವಸಂಸ್ಕಾರವಿವರಣೆ, ಮರಣಿಸಿದವರು ಸೂರ್ಯನಿಂದ ಮತ್ತೆ ಪುನರ್ಜನ್ಮವಿಚಾರ, ವಿವಾಹವಿಧಿಗಳು, ಮಂತ್ರ ಸ್ಮರಣ ನಿರಂತರ ಮಾನವಕುಲಕ್ಕೆ ಅಮೃತಮಯ. ಯುದ್ಧ, ಹಿಂಸೆಗಳು ನಿಷಿದ್ಧವೆಂದು ಸಾಮವೇದ ಸಾರುತ್ತೆ. ಶಾಂತ ಪ್ರವರ್ತನಾದವನೇ ನರನೆಂದು ಸಾರುವ ಈ ಮಂತ್ರ ಎಲ್ಲಾ ಕಾಲಕ್ಕೂ ಆದರ್ಶವೇ.

ಸಘಾಃ ಯಸ್ಯೇ ದಿವ್ಯೋ ನರೋ
ಧಿ ಯಾ ಮರ್ತಸ್ಯ ಶಮತಃ
ಊತೀಸ ಬೃಹತೋ ದಿವೋ
ದ್ವಿಷೋ ಅಗಂ ಹೋ ನ ತರತಿ

(365)

ಸಾಮವೇದದಲ್ಲಿ ಕೃಷ್ಣನೆಂಬ ಅಸುರ (ಕತ್ತಲು) ಆತನನ್ನು ಇಂದ್ರನು ಕೊಂದನು. ಇಲ್ಲಿ ದಾನಶೀಲನಾದ ದಧೀಚಿ ಕಥೆ, ಹಿರಣ್ಯ ಕಶಿಪು ಚರಿತೆ. ಅಂಗೀರಸನ ಕಥೆ. ಋತುಗಳ ವರ್ಣನೆ ಪ್ರಾರಬ್ಧಕರ್ಮ ವಿಚಾರ. ಸ್ವರ್ಗ, ಖಗೋಲವಿಚಾರ ದಾನವಿಚಾರ ಅಶ್ವಿನಿ ದೇವತೆಗಳ, ನಕ್ಷತ್ರಗಳ ವಿಚಾರ, ಕರ್ಮ, ಅಕರ್ಮವಿಚಾರ, ಈಶಾವಾಶ್ಯೋಪನಿಷತ್ತಿನ ಭಾವಾರ್ಥಗಳನ್ನು ಸಾಮವೇದದಲ್ಲಿ ನಾವು ಕಾಣಬಹುದು. ಮಧುವಿದ್ಯೆಯ ವಿಚಾರ, ಸನಾತನರು, ಸರ್ವಕಾಲದಲ್ಲೂ ಸರ್ವಜ್ಞಾನ ಸಂಪತ್ತನ್ನು ಸಾಮವೇದದಲ್ಲಿ ಕಂಡಿದ್ದಾರೆ.

ಜೈಮಿನಿ ಮಹರ್ಷಿ ಕರ್ಮಕಾಂಡ ಪ್ರತಿಪಾದಕವಾದ ಪೂರ್ವಮೀಮಾಂಸಾಶಾಸ್ತ್ರವನ್ನು ರಚಿಸಿದರು.

## ಜೈಮಿನಿ ಧರ್ಮಸೂತ್ರ
## ಪೂರ್ವ ಮೀಮಾಂಸಾ ಸೂತ್ರಗಳು

ಪುರುಷಾರ್ಥಗಳಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷವೆಂದು ನಾಲ್ಕುವಿಧ. ಧರ್ಮಶಾಸ್ತ್ರಕ್ಕೆ ಜೈಮಿನಿ ಋಷಿಯು ಸೂತ್ರಗಳನ್ನು ಬರೆದಿದ್ದಾರೆ. ಈತನ ದರ್ಶನಕ್ಕೆ ಜೈಮಿನಿ ದರ್ಶನವೆಂದೂ ಕರ್ಮಕಾಂಡವಾದ ಪೂರ್ವ ಮೀಮಾಂಸಕ್ಕೆ ಧರ್ಮ ಮೀಮಾಂಸವೆಂದೂ ಹೆಸರು. ಅದರ ಪ್ರಣೇತ ಜೈಮಿನಿ. ಇವು ೧೨ ಅಧ್ಯಾಯಗಳನ್ನು ಒಳಗೊಂಡಿವೆ. ಜೈಮಿನಿ ಸೂತ್ರಗಳನ್ನು ಪ್ರಾಭಾಕರಮತಸ್ಥರು, ಭಾಟ್ಟ ಮತಸ್ಥರು ಅನುಸರಿಸುತ್ತಾರೆ. ವೇದ ಪ್ರಾಮಾಣ್ಯವೆಂದು ಸಾರುವ ಇಹಪರ ಸುಖಕ್ಕಾಗಿ ಮಾಡುವ ಕರ್ತವ್ಯಗಳನ್ನು ತಿಳಿಸುವ ಈ ಧರ್ಮಗ್ರಂಥ ಆಗೋಚರನಾದ, ನಿತ್ಯನಾದ ಪರಮಾತ್ಮನ ಸ್ವರೂಪಗಳನ್ನು ತಿಳಿಸುತ್ತದೆ. ಪೂರ್ವಮೀಮಾಂಸವು ಭಟ್ಟಮತ ಪ್ರಕಾರ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ ಅನುಪಲಬ್ಧಿ--ಎಂದು ಆರು ಪ್ರಮಾಣಗಳನ್ನು ತಿಳಿಸುತ್ತವೆ. ಈ ಮತದ ಪ್ರಕಾರ ಇಂದ್ರಾದಿ ದೇವತೆಗಳಿಗೆ ದೇಹೇಂದ್ರಿಯಗಳು ಇಲ್ಲ. ಮಂತ್ರಸ್ವ

## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

### ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5--00 | ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 | ಪ್ರಾ 7--00 |
| ತೋಮಾಲ ಸೇವೆ (ಆರ್ಜಿತ) | ಪ್ರಾ 7--30 | ಪ್ರಾ 8--00 |
| ಅರ್ಚನೆ (ಆರ್ಜಿತ) | ಪ್ರಾ 8--00 | ಪ್ರಾ 8--00 |
| ಸರ್ವದರ್ಶನ | ಪ್ರಾ 9--00 | ಪ್ರಾ 12--30 |
| | ಮ. 1--00 | ಸಂ 6--00 |
| | ರಾ. 7--00 | ಪ್ರಾ 8--45 |
| ಏಕಾಂತಸೇವೆ | | ರಾ. 9--00ಕ್ಕೆ |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ. 5--30 ರಿಂದ ಪ್ರಾ. 6--30 ರ ವರೆಗೆ ಮಾತ್ರ.

### ಆರ್ಜಿತ ಸೇವೆಗಳು

| | |
|---|---|
| 1. ಗರುಡವಾಹನ | 32--00 |
| 2. ಚಂದ್ರಪ್ರಭ ವಾಹನ | 32--00 |
| 3. ಗಜವಾಹನ | 32--00 |
| 4. ಅಶ್ವವಾಹನ | 32--00 |
| 5. ಸಿಂಹವಾಹನ | 32--00 |
| 6. ಹಂಸವಾಹನ | 32--00 |
| 7. ಚಿಕ್ಕಶೇಷವಾಹನ | 32--00 |
| 8. ದೊಡ್ಡ ಶೇಷವಾಹನ | 62--00 |
| 9. ಸೂರ್ಯಪ್ರಭವಾಹನ | 62--00 |

### ಪಡಿಪ್ರಸಾದಗಳು

| | |
|---|---|
| 1. ದೋಸೆ ಕಾಲಸೋಲ | 35--00 |
| 2. ದಧ್ಯೋದನ " | 40--00 |
| 3. ಪುಳಿಯೋಗರೆ " | 50--00 |
| 4. ಪೊಂಗಲು " | 55--00 |
| 5. ಸಕ್ಕರಪೊಂಗಲ್ " | 65--00 |
| 6. ಶಾಕರ ಭಾತ್ " | 85--00 |
| 7. ಕೇಸರಿಭಾತ್ " | 90--00 |
| 8. ಸೀರ " | 155--00 |

ವಿವರಗಳಿಗೆ:
ಪೇಷ್ಕಾರ್,
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿ. ತಿ. ದೇ.

ರೂಪವುಳ್ಳವರು, ಪಂಚಭೂತಗಳು ನಿತ್ಯವು. ಪ್ರತಿ ಆತ್ಮನು ಅವರವರ ಕರ್ಮಾನುಸಾರ ಶರೀರದಲ್ಲಿ ಸುಖದುಃಖಗಳನ್ನು ಅನುಭವಿಸುತ್ತಾನೆ.

ದೇಹಾಂತ್ಯದಲ್ಲಿ ಆತ್ಮವು ಪ್ರಕೃತಿಯಲ್ಲಿ ಲೀನವಾಗುತ್ತೆ. ಪ್ರಾಭಾಕರಮತವು ಕೂಡ ಜೈಮಿನಿ ದರ್ಶನವನ್ನೇ ಬೋಧಿಸುತ್ತದೆ. ಜೈಮಿನಿ ರಚಿಸಿದ ಪೂರ್ವ ಮೀಮಾಂಸಾ ಸೂತ್ರಗಳು ೧೬ ಅಧ್ಯಾಯಗಳು. ಇದಕ್ಕೆ ಉಪವರ್ಷ, ಭಾವದಾಸ, ದೇವಸ್ವಾಮಿ, ರಾಜ ಚೂಡಾಮಣಿ ದೀಕ್ಷಿತ, ಭಾಸ್ಕರ ರಾಯ, ಕುಮಾರಿಲ ಭಟ್ಟ, ಮೊದಲಾದವರು ವ್ಯಾಖ್ಯಾನಗಳನ್ನು ಬರೆದಿದ್ದಾರೆ.

ಮಹಾಭಾರತದಲ್ಲಿ ಜೈಮಿನಿ ವಿಷಯ ಆಸ್ತಿಕ ಪರ್ವದಲ್ಲಿ -- ಜನಮೇಜಯನ ಸರ್ಪಯಾಗದಲ್ಲಿ ಶೌನಕರು ಸೂತಪುತ್ರನನ್ನು ಕುರಿತು "ಸೂತಪುತ್ರ ಸರ್ಪಯಾಗದಲ್ಲಿ ಭಾಗವಹಿಸಿದ್ದ ಋತ್ವಿಜರ ನಾಮಾವಳಿಯನ್ನು ತಿಳಿಸು, ಸರ್ಪಯಾಗದ ವಿಧಿಯನ್ನು ತಿಳಿದ ಯಾವ ಯಾವ ಋಷಿ ಆ ಯಜ್ಞದಲ್ಲಿ ಭಾಗವಹಿಸಿದ್ದರೆಂಬುದನ್ನು ತಿಳಿಸು" ಎಂಬುವುದಾಗಿ ಬೇಡಿಕೊಂಡಾಗ 'ಚಂಡ ಭಾರ್ಗವನೆಂಬ ಬ್ರಾಹ್ಮಣನು ಆ ಮಹಾಯಜ್ಞದಲ್ಲಿ ಹೋತೃನಾಗಿದ್ದನು. ಈತನು ಚ್ಯವನ ಮಹರ್ಷಿಯ ವಂಶದಲ್ಲಿ ಹುಟ್ಟಿದವನು, ವೇದವೇದಾಂಗಪಾರಂಗತನಾಗಿದ್ದನು. ವೃದ್ಧನಾದ ಮತ್ತು ವಿದ್ಯಾಪಾರಂಗತನಾದ ಕೌತ್ಸ ಜೈಮಿನಿಯು ಸರ್ಪಯಾಗದಲ್ಲಿ ಉದ್ಗಾತೃವಾಗಿದ್ದನು. ಶಾರ್ಙ್ಗರವನು ಬ್ರಹ್ಮನಾಗಿಯೂ, ಪಿಂಗಲನು ಅಧ್ವರ್ಯುವಾಗಿಯೂ ಭಾಗವಹಿಸಿದ್ದರು. ಮತ್ತೆ ವ್ಯಾಸರ ಪುತ್ರರು, ಶಿಷ್ಯರೂ ಮಹರ್ಷಿಗಳಾದ ಉದ್ದಾಲಕ, ಪ್ರಮತಕ ಶ್ವೇತಕೇತು, ಪಿಂಗಲ, ಅಸಿತ, ದೇವಲ, ನಾರದ, ಪರ್ವತ, ಆತ್ರೇಯ, ಕುಂಡ, ಜಠರ ಕಾಲಘಟ, ವಾತ್ಸ್ಯಶ್ರುತಶ್ರವ, ಕೋಹಲ, ದೇವಶರ್ಮ, ಮೌದ್ಗಲ್ಯ ಸಮಸೌರಭ, ಮುಂತಾದವರು ಆ ಸರ್ಪಯಾಗದಲ್ಲಿ ಭಾಗವಹಿಸಿದ್ದರು, ಎಂಬುವುದಾಗಿ ಮಹಾಭಾರತದಲ್ಲಿ ವರ್ಣಿಸಲಾಗಿದೆ.

ಕನ್ನಡದ ಲಕ್ಷ್ಮೀಶಕವಿಯು ಸಂಸ್ಕೃತದ ಜೈಮಿನಿ ಭಾರತವನ್ನು ಮೆಚ್ಚಿ ಮೂಲ ಗ್ರಂಥದಲ್ಲಿ ಬರುವ ಸನ್ನಿವೇಶಗಳನ್ನು ಧರ್ಮವನ್ನು ನೀತಿಗಳನ್ನು ಚಾಚೂ ತಪ್ಪದೆ ತನ್ನ ಕಾವ್ಯದಲ್ಲಿ ಭಟ್ಟಿ ಇಳಿಸಿರುವುದರಿಂದಲೆ ಕನ್ನಡದ ಜೈಮಿನಿ ಭಾರತ ಜನರ ಮನಸ್ಸನ್ನು ಗೆದ್ದು ವಿಶಿಷ್ಟ ಸ್ಥಾನವನ್ನು ಪಡೆಯಿತು. ಆದ್ದರಿಂದಲೇ ಲಕ್ಷ್ಮೀಶ ಕವಿಯು ಕರ್ಣಾಟಕಕವಿ ಚೂತವನ ಚೈತ್ರ ಎಂಬುವ ಬಿರುದನ್ನು ಪಡೆದನು. ಅಂತಹ ಸುಂದರ ಸಂಸ್ಕೃತ ಕನ್ನಡ ಜೈಮಿನಿ ಭಾರತದ ಕೆಲ ಪದ್ಯಗಳನ್ನು ಮುಂದೆ ವಿಮರ್ಶಿಸಿ, ಜೈಮಿನಿ ಮಹರ್ಷಿಯ ಮಹಿಮೆಯನ್ನು ಕೊಂಡಾಡುವ.

ಜೈಮಿನಿ ಮಹರ್ಷಿ ಬರೆದ ಅಶ್ವಮೇಧಪರ್ವವು ಬಹಳ ಪ್ರಸಿದ್ಧವಾಗಿದೆ. ಜೈಮಿನಿ ಋಷಿಯು ಅಷ್ಟಮಾಧ್ಯಾಯದಲ್ಲಿ ವ್ಯಾಸಮಹಾಮುನಿಯು ಧರ್ಮರಾಜನಿಗೆ ಲೋಕ ಧರ್ಮ ರಹಸ್ಯಗಳನ್ನು ತಿಳಿಸುವ ಸಂದರ್ಭದಲ್ಲಿ ಸಂಸ್ಕೃತದ ಈ ಶ್ಲೋಕಗಳು ಹೀಗಿವೆ

ಬ್ರಾಹ್ಮಣೋ ಧರ್ಮಶಾಸ್ತ್ರಾಣಿ
ಸಮ್ಯಕ್ ಜ್ಞಾತ್ವಾ ನ ಕುತ್ಸಿತಮ್
ಪ್ರಕರೋತಿ ಶುಭಂ ಕರ್ಮ
ಚೇಹ ಕೀರ್ತಿಂ ಸುಖಂ ಪರೇ
ಪರಾಪವಾದಾತ್ ಭೀತಶ್ಚ
ಪರದ್ರವ್ಯಂ ಪರಸ್ತ್ರಿಯಂ
ನ ಕಾಮಯೇನ್ನ ಗೃಹ್ಣಾತಿ
ನ ಶೃಣೋತಿ ಹಿ ತದ್ವಚಃ

ಜೈಮಿನಿ ಭಾರತದ ಈ ಬ್ರಾಹ್ಮಣ ಧರ್ಮವನ್ನು ಕವಿಲಕ್ಷ್ಮೀಶನು ತನ್ನ ಐದನೆಯ ಸಂಧಿ೪೯ ಪದ್ಯದಲ್ಲಿ ಲಲಿತ ಪದಾವಳಿಗಳಿಂದ ಬರೆದ ಯಮಕ ಕಾವ್ಯ--

ಸರ್ವ ನಿಗಮಾರ್ಥಮಂ
ತಿಳಿದು ಸತ್ಕರ್ಮಮಂ
ಸರ್ವ ಕಾಲಂ ಗೆಯ್ದು
ಪರವಧೂ ವಿಷಯಮಂ
ಸಾರ್ವ ಚಿಂತೆಯನುಳಿದು
ಲೋಕಾಪವಾದಮಂ ಪರಿಹರಿಸಿ
ಪರರೊಡವೆಗೆ ಪಾರ್ವನಲ್ಲದೆ
ಸದಾಚಾರದಿಂ ನಡೆದೊಡಾ
ಪಾರ್ವನಿಹದೊಳ್ ಕೀರ್ತಿ
ಪರನಾಗಿ ಬಳಿಕವಂ
ಪಾರ್ವ ನುತ್ತಮಗತಿಗೆ ದೇಹಾವಸಾನದೊಳ್

ಭೂಪಾಲ ಕೇಳೆಂದನು (ಇಲ್ಲಿ ಪಾರ್ವ ಅಂದರೆ ಬ್ರಾಹ್ಮಣ ಹಾಗೂ ನಿರೀಕ್ಷಿಸುವವನು ದ್ವಂದ್ವಾರ್ಥ) ಸಂಸ್ಕೃತದ ಜೈಮಿನಿ ಋಷಿ ಕ್ಷತ್ರಿಯ ಧರ್ಮವನ್ನು ಹೇಳುವಾಗ--

"ಕ್ಷತ್ರಿಯಃ ಸರ್ವ ಧರ್ಮಜ್ಞೋ
ದಾತಾ ಯುದ್ಧ ಪರಾಯಣಃ
ಆತ್ಮವಿತ್ ಸಂಗರೇ ಪ್ರಾಣಾನ್
ಸಮ್ಮುಖಃ ತ್ಯಜತೇ ಯದಿ
ಸಂಪ್ರಾಪ್ನೋ ತ್ಯಮಲಾಂ ಕೀರ್ತಿ
ಮಿಹ ಲೋಕೇ ಪರತ್ರಚ

ಕನ್ನಡದ ಲಕ್ಷ್ಮೀಶನ ಶಬ್ದ ಗುಣಗಳ ಪ್ರಯೋಗ ಈ ಶ್ಲೋಕಕ್ಕೆ ಪದ್ಯ ಇಂತಿದೆ--

ಸರ್ವ ಧರ್ಮಗಳನರಿದೋವಿದೊಡೆ
ರಣಕೆ
ಸರ್ವನಲ್ಲದೊಡಾತ್ಮ
ವಿದನಾದೊಡಿಳೆಯೊಳ್ ಪೆ
ಸರ್ವಡೆದು ಕ್ಷತ್ರಿಯಂ ಕಾದಿ ಮಡಿದೊಡೆ
ಸೂರೆಗೊಂಬನಮರಾವತಿಯನು

ಜೈಮಿನಿ ವೈಶ್ಯ ಧರ್ಮವನ್ನು ಸಂಸ್ಕೃತದಲ್ಲಿ ಹೇಳಿದ್ದನ್ನು--

"ವೈಶ್ಯೋ ಧನ ಸಮೃದ್ಧಸ್ತು
ಸತ್ಯವಾದೀ ಪ್ರಿಯಾತಿಥಿಃ
ಶುಶ್ರೂಷಾಣಾಂ ಗವಾಂ ಕುರ್ಯಾತ್
ತತ್ಪರಃ ಪ್ರಾಣಿನಾಂ ಹಿತಂ
ಪ್ರಾಪ್ನೋತಿ ವಿಮಲಾಂ ಕೀರ್ತಿಂ
ಗತಿಂ ಕೃಷ್ಣನಿಷೇವಣಾತ್"

ಇದನ್ನು ಲಕ್ಷ್ಮೀಶನು ಕನ್ನಡದಲ್ಲಿ ---

ಮರ್ವಚನದಿಂ ನುಡಿಯ
ದತಿಥಿಗಳ ಕೆಡನೂಡ
ಮರ್ವಿ ಧನಮಂ ಕೂಡಿ ಗೋ ರಕ್ಷಣಂ ಮಾ
ಮರ್ವರೆಯೊಳಿದು ಕೀರ್ತಿ ವೈಶ್ಯಂಗೆ
ಪರಗತಿ ಮುಕುಂದ ಸೇವೆಯೊಳಪ್ಪುದು

ಎಂಬುದಾಗಿ ಬರೆದಿದ್ದಾನೆ. ಸ್ತ್ರೀಯರ ಧರ್ಮವನ್ನು ಜೈಮಿನಿ ಮಹರ್ಷಿಗಳು ಬರೆಯುತ್ತಾ--

ನಿತ್ಯಂ ಧರ್ಮ ಪರಾ ಯಾತು
ಗೃಹಕಾರ್ಯಕರೀ ತಥಾ
ಶುಶ್ರೂ ಶ್ವಶುರಯೋಸ್ತ್ವ
ಪಾದವಂದನ ತತ್ಪರಾ................
ಬಾಲತ್ವೇ ರಕ್ಷತಿ ಪಿತಾ
ಯೌವನತ್ವೇ ನಿಜಃ ಪತಿಃ
ವಾರ್ಧಕೇ ರಕ್ಷತೇ ಪುತ್ರೋ ನ
ಸ್ವತಂತ್ರಾ ಹಿ ಯೋಷಿತಃ
ಸ್ವತಂತ್ರತಾ ಯೋಷಿತಾಂ ಹಿ
ನ ಶುಭಾಯೋಪಕಲ್ಪತೇ

ಈ ಶ್ಲೋಕದ ಭಾವವನ್ನೇ ಲಕ್ಷ್ಮೀಶ ಕವಿ ತನ್ನ ಕಾವ್ಯದಲ್ಲಿ ಸೊಗಸಾಗಿ ಚಿತ್ರಿಸಿದ್ದಾನೆ

ಪತಿವ್ರತದೊಂದರಿಂದು
ಲ್ಲಡದ ಸತಿಗಮದು ಪರ
ಗತಿಯಲ್ಲದಂಗನೆಯರತಿ

ಸಾಹಸಿಗಳವರ
ಕೃತಕ ಶೀಲಂಗಳಂ
ನಂಬಲಾಗದು ಮೇಣ್
ಸ್ವತಂತ್ರಮಂ ಕೊಡಲಾಗದು
ಪಿತನಿಂದ ಬಾಲ್ಯದೊಳ್
ಕಾಂತನಿಂ ಪ್ರಾಯದೊಳ್
ಸುತನಿಂದ ವೃದ್ಧಾಪ್ಯ
**ದೊಳ್ ಕುಲಸ್ತ್ರೀ ಸುರ**
**ಕ್ಷಿತೆ ಯಾಗ ದಿರ್ದೊಡವಳಿಂದ**
**ನಿಜ ವಂಶಕುಪಹತಿ ಬಂದೊಡಲ್ಲದಿರದು**

ಯಾರ ಮನೆಯಲ್ಲಿ ಲಕ್ಷ್ಮಿಯು ಸ್ಥಿರವಾಗಿ ನೆಲೆಸಿರುತ್ತಾಳೆ ಎಂಬುವುದನ್ನು ಜೈಮಿನಿ ಮಹರ್ಷಿಯು---

ಶ್ರುಣು ವತ್ಸ ಪ್ರವಕ್ಷ್ಯಾಮಿ
ಯಥಾ ಲಕ್ಷ್ಮೀಃ ಸ್ಥಿರಾ ಭವೇತ್
ಸತ್ಯಂ ಶೌಚಂ ವಿಶೇಷೇಣ
ಪ್ರಾಣಿನಾಂ ಶಿವಚಿಂತನಮ್
ತತ್ರ ಸ್ಥಿರಾಯತೇ ಲಕ್ಷ್ಮೀಃ
ತತ್ರ ನಾರಾಯಣೋಹರಿಃ
ಮಾತರಂ ಪಿತರಂ ಪುತ್ರೋ
ಭ್ರಾತರಂ ಜ್ಯೇಷ್ಠಮೇವ ಚ
ಮಾನ್ಯತೇ ಬಾಂಧವ ಗಣಂ
ತತ್ರ ಲಕ್ಷ್ಮೀಃ ಸ್ಥಿರಾಯತೇ

ಇದನ್ನು ಲಕ್ಷ್ಮೀಶ ಹೀಗೆ ಹೇಳಿದ್ದಾನೆ.

ವತ್ಸ ಕೇಳಾದೊಡೀ
ಧರೆಯೊಳಖಿಲ ಪ್ರಾಣಿ ವತ್ಸಲನ
ಸತ್ಯ ಶೌಚಾನ್ವಿತನ ಮನೆಗೆ ಶ್ರೀ
ವತ್ಸ ಲಾಂಛನನರಸಿ ತೊಡವೆನಿಪಳಾವಗಂ
ಪತಿ ಪರಾಯಣೆ ಯಾಗಿಹ
ಸತ್ ಸತಿಯರೆಲ್ಲಿ ಮೇಣ್
....................ಸತ್ಸರೋಜಾಸ್ತ್ರ
ಕಳುಕದ ಪುರುಷನೆಲ್ಲಿ ವಿಲ
ಸತ್ಸಮುದ್ರಾತ್ಮಜೆ ಸರಾಗದಿಂದಲ್ಲಿ
ಸುಸ್ಥಿತಿಯಾಗಿ ನೆಲಸಿರ್ಪಳು

ಸಂಸ್ಕೃತ ಜೈಮಿನಿ ಭಾರತದಲ್ಲಿ ಲವನು ಮಾಡಿದ ಆದಿತ್ಯಸ್ತುತಿ--

ನಮಃ ಸವಿತ್ರೇ ಸೂರ್ಯಾಯ
ಪೂಷ್ಣೇ ಜ್ಯೋತಿಷ್ಮತೇ ನಮಃ
ನಮಃ ಸಪ್ತ ತುರಂಗಾಯ
ನಿತ್ಯಂ ವ್ಯೋಮ ಚರಾಯ ಚ
ಮೇಷಾದೀನಾಮಧೀಶಾಯ
**ಮಾಸಿ ಮಾಸಿ ನಮೋ ನಮಃ**
**ಅಯನ ದ್ವಯಕರ್ತ್ರೇ ಚ**
**ಪ್ರಕಾಶಾಯ ನಮೋಽಸ್ತುತೇ**
**ನಮಃ ಸುವರ್ಣ ವರ್ಣಾಯ**
**ಸಹಸ್ರ ಕಿರಣಾಯ ಚ**
**ಜಗತಾಮೇಕ ನೇತ್ರಾಯ**
**ಭವತೀ ಭಾಸ್ಕರಾಯ ಚ**
ದಿವಾಕರಾಯ ಪಿಂಗಾಯ
ಪಯಃ ಸ್ರಷ್ಟ್ರೇ ಘನಾಯತು
ನಮಃ ಸುವರ್ಣ ವರ್ಣಾಯ
ಸಹಸ್ರ ಕಿರಣಾಯ ಚ
ಋಗ್ವೇದರೂಪಿಣೇ ತುಭ್ಯಂ
ನಮೋ ಬ್ರಾಹ್ಮಣ ರೂಪಿಣೇ
ಯಜುಃ ಸಾಮಾಥರ್ವಕರ್ತ್ರೇ
ಪುರಾಣಾಗಮಕಾರಿಣೇ
ಗಾಥೇತಿಹಾಸಕರ್ತ್ರೇ ತೇ
ನಮೋ ಬ್ರಹ್ಮಸ್ವರೂಪಿಣೇ
ನಮೋ ವಿಶ್ವ ಸ್ವರೂಪಾಯ
ರುದ್ರ ರೂಪಾಯ ತೇ ನಮಃ
ವಿಶ್ವಸ್ಯ ವಾಂಛಿತಕರಾಯ
ಮನೋ ರಮಾಯ
ವಿಶ್ವೇಶ್ವರಾಯ ಪುರುಷಾಯ ಸದಾಮಲಾಯ
ಹಂಸಾಯ ಚಂಡಘೃಣಯೇ
ಮಣಿಕುಂಡಲಾಯ
ಸೌಮ್ಯಾಹವೇ ಜಯಕರಂ ಧನುರದ್ಯ ಮೇಽಸ್ತು

ಲಕ್ಷ್ಮೀಶ ಜೈಮಿನಿ ಭಾರತದ ೨೦ ನೇ ಸಂಧಿಯಲ್ಲಿ ಈ ಮೇಲಿನ ಸಂಸ್ಕೃತ ಶ್ಲೋಕಗಳನ್ನು ಅನುಸರಿಸಿಯೇ ರಚಿಸಿದ ರವಿ ಸ್ತೋತ್ರವು--

ಮಿತ್ರಾಯ ಸೂರ್ಯಾಯ
ಹಂಸಾಯ ಪೂಷ್ಣೇ
ಸವಿತ್ರೇ ಜಗಚ್ಚಕ್ಷುಸೇ ಚಂಡ ಘೃಣಯೇ
ಪವಿತ್ರಾಯ ಪಿಂಗಾಯ ಪುರುಷಾಯ
ಭಾನವೇ ಜ್ಯೋತಿಷೇ ಭಾಸರಾಯ
ಸತ್ಯಕ ರೂಪಾಯ ವಿಮಲಾಯ ವಿಶ್ವರ
ಕ್ಷೇತ್ರೇ ಸಹಸ್ರ ಕಿರಣಾಯ ರವಯೇ
ಮಂದಪಿತ್ರೇ ದಿವಾಕರಾಯ ಬ್ರಹ್ಮ
ವಿಷ್ಣುರುದ್ರಾತ್ಮನೇ ತುಭ್ಯಂ ನಮಃ

ಜಗಕೆ ನೀನೊಂದು ಕಣ್ಣಾಗಿರ್ಪೆ ಮೇಣೆರಡು
ಬಗೆಯ ಪಥದೊಳ್ ನಡೆವೆ
ತಿಳಿಯಲ್ಕೆ ಮೂರು ಮೂ
ರ್ತಿಗಳ ನೊಳಕೊಂಡಿರ್ಪೆ ಸಲೆ ಸಂದ
ನಾಲ್ಕು ವೇದಂಗಳೊಡಲಾಗಿ ತೋರ್ಪೆ
ಅಗಲದೆ ಪಂಗದೊಳ್ ಕಾಣಿಸುವೆ ಪರಿಪರಿಯೊ
ಳೊಗೆದಾರು ಋತುಗಳೊಳ್
ವರ್ತಿಸುವೆ ಸಂತತಂ
ಗಗನ ಕ್ಷೇತ್ರಮಂ ಕೊಂಡೇಳ್ಕೆ
ದೇವ ಬೆಳ್ಗೊಟ್ಟುಗಳ ದೇಕೆಂದದು
ಪತ್ತುದೆಸೆಯಂ ದೆಳಗಿಸುವೆ ಪನ್ನೆರಡುರಾಶಿ
ಗೊತ್ತಾಸೆಯಾಗಿರ್ಪೆ ಶತಪತ್ರಮಿತ್ರನಹೆ
ಮತ್ತೆ ಸಾಸಿರ ಕಿರಣದಿಂದೆಸೆವ
**ಲಕ್ಷಯೋಜನ ವಳಿತೆಯೊಳ್ ತೊಳಗುವೆ**
**ಬಿತ್ತರ ದನಂತದೊಳ್ ಸಂಚರಿಪೆ ದೇವನಿ**
**ನ್ನುತ್ತಮ ಗುಣಾವಳಿಯ ನೆಣಿಸಲೆನ್ನಳವೆ ಬಿ**
**ಲ್ಲಿತ್ತುಳುಹ ದೇಕೆಂದು ದಿನಮಣಿಯನಾ**
**ಲವಂ ನುತಿಸಿದಂ ಭಕ್ತಿಯಿಂದ**

## ಜೈಮಿನಿ ಮಾರ್ಕಂಡೇಯ ಸಂದರ್ಶನ

ಜೈಮಿನಿ ಮಹರ್ಷಿಯು ಒಮ್ಮೆ ಮಾರ್ಕಂಡೇಯ ಮುನಿಗಳ ಆಶ್ರಮಕ್ಕೆ ಬಂದು "ಮುನೀಂದ್ರಾ ನನ್ನ ಗುರುವಾದ ವ್ಯಾಸ ಮಹರ್ಷಿಗಳಲ್ಲಿ ಮಹಾಭಾರತವನ್ನು ಕೇಳಿರುವೆ, ಅವುಗಳಲ್ಲಿ ಕೆಲವು ನಿಗೂಢ ಅರ್ಥಗಳಿವೆ, ತಾವು ಅವುಗಳನ್ನು ನನಗೆ ತಿಳಿಸಬೇಕೆಂದು ಪ್ರಾರ್ಥಿಸಿಕೊಂಡಾಗ ಮಾರ್ಕಂಡೇಯ ಮಹರ್ಷಿ "ಋಷಿವರ್ಯ, ನಾನು ಈಗ ನಿಯಮಬದ್ಧನಾಗಿ ಕಠೋರ ವ್ರತದಲ್ಲಿರುವುದರಿಂದ ವ್ಯಾಸರ ಕ್ಲಿಷ್ಟ ಶ್ಲೋಕಗಳಿಗೆ ಅರ್ಥವನ್ನು ಹೇಳಬೇಕಾದರೆ ಬಹುಕಾಲ ಬೇಕಾಗುತ್ತೆ. ಅದನ್ನು ನಾನು ಈಗ ಹೇಳಲು ಕಾಲಾವಕಾಶವಿಲ್ಲ. ವಿಂಧ್ಯಪರ್ವತದಲ್ಲಿ ತುಂಬುರನ ಸಹೋದರ ಸುಕೃತನಿಗೆ ಜನಿಸಿದ ಮಕ್ಕಳಾದ ಪಿಂಗಾಕ್ಷ, ವಿರಾಟ, ವೃತ್ತು, ಹಾಗೂ ಸುಮುಖರೆಂಬ ಈ ನಾಲ್ಕು ಮಕ್ಕಳು ಶಾಪವಶಾತ್ ಪಕ್ಷಿಗಳಾಗಿ ಅಲ್ಲಿ ವಾಸಮಾಡುತ್ತಿದ್ದಾರೆ. ಆ ಪಕ್ಷಿಗಳಿಗೆ ಮನುಷ್ಯಭಾಷೆ ಬರುತ್ತೆ. ಆ ಪಕ್ಷಿಗಳು ನಿನ್ನ ಸಂದೇಹಗಳನ್ನು ನಿವಾರಿಸುತ್ತವೆ" ಎಂಬುವುದಾಗಿ ಹೇಳಿದನು. ಮಾರ್ಕಂಡೇಯ ಮಹರ್ಷಿಯ ಮಾತಿನಂತೆ ಜೈಮಿನಿಯೂ ಆ ವಿಂಧ್ಯಗಿರಿಗೆ ಹೋಗಿ ಪಕ್ಷಿಗಳನ್ನು ಸಂದರ್ಶಿಸಿ ಮಹಾಭಾರತದಲ್ಲಿ ಬರುವ ಸಂದೇಶಗಳನ್ನು ಕೇಳಲು ಶ್ರೀ ನಾರಾಯಣವ್ಯೂಹಚತುಷ್ಟಯ ವಿಚಾರ, ಪಾಂಚಾಲಿ ಐದು ಜನ ಗಂಡಂದಿರನ್ನು ಪಡೆದ ಧರ್ಮ ವಿಷಯ, ಇಂದ್ರನು ಐದು ಬಗೆಯಲ್ಲಿ ಪಾಂಡವರಾಗಿ ಜನ್ಮಿಸಿದ ರಹಸ್ಯ ವಿಷಯವನ್ನು, ಬಲರಾಮನ ತೀರ್ಥಯಾತ್ರೆ ವಿಚಾರ, ಹರಿಶ್ಚಂದ್ರೋಪಖ್ಯಾನ, ಕ್ರೋಷ್ಟು ಮಾರ್ಕಂಡೇಯ ಸಂವಾದವನ್ನು ಆ ಪಕ್ಷಿಗಳು ಜೈಮಿನಿ ಋಷಿಗಳಿಗೆ ತಿಳಿಸಿದವು. ಇದೇ ಮಾರ್ಕಂಡೇಯ ಪುರಾಣವೆಂದು ಬಹು ಪ್ರಸಿದ್ಧವಾಗಿದೆ. ಮಾರ್ಕಂಡೇಯ ಪುರಾಣದ

ಆಧಾರದ ಮೇಲೆಯೇ ಬಹುಶಃ ಜೈಮಿನಿಯು ಧರ್ಮವೆಂದರೆ ವಿಧಿಯು ನಿರ್ದೇಶಿಸುವ ಅಪೇಕ್ಷಿತಫಲ. ಧರ್ಮವೆಂದರೆ ಸುಖಕ್ಕೆ ಕಾರಣವಾಗುವ ವೈದಿಕಮಂತ್ರಗಳು ಹಾಗೂ ಕಲ್ಪಗಳು ತನ್ನ ಪೂರ್ವ ಮೀಮಾಂಸ ಸೂತ್ರವಾದವಲ್ಲಿ "ಚೋದನಾ ಲಕ್ಷಣೋಽರ್ಥೋ ಧರ್ಮಃ" ಎಂಬುವುದಾಗಿ ಪ್ರತಿಪಾದಿಸಿದ್ದಾನೆ, ಜೈಮಿನಿಯು ಪೂರ್ವಮೀಮಾಂಸದಲ್ಲಿ "ಮಂತ್ರಾಶ್ಚ ಬ್ರಾಹ್ಮಣಂ ಚ ವೇದಃ" ಎಂಬುವಲ್ಲಿ ಸೂತ್ರಗಳು ವೇದಗಳಲ್ಲ. ಆದರೂ ಅವುಗಳು ವೇದಕ್ಕೆ ಸಂಬಂಧಪಟ್ಟ ಮಂತ್ರಗಳು. ಪೂರ್ವಮೀಮಾಂಸೆಗೂ ಇತರ ಧರ್ಮಸೂತ್ರಗಳಿಗೆ ಭಿನ್ನಾಭಿಪ್ರಾಯ ಬಂದಾಗ ಜೈಮಿನಿ ಧರ್ಮಸೂತ್ರಗಳನ್ನೇ ಅವಲಂಬಿಸುತ್ತಾರೆ. ಶ್ರುತಿಗೂ ಸ್ಮೃತಿಗೂ ವಿರೋಧ ಬಂದಾಗ ಸ್ಮೃತಿಯನ್ನು ಕಡೆಗಣಿಸಬೇಕು. ಆದರೆ ವಿರೋಧವಿಲ್ಲದಿದ್ದಾಗ ಸ್ಮೃತಿಯು ಯಾವುದೋ ಒಂದು ಶ್ರುತಿಯನ್ನು ಅವಲಂಬಿಸಬೇಕೆಂದು ತಿಳಿಸುತ್ತಾ--

"ಯೇಽಸ್ಮಿನ್ ಪ್ರೀತಿಃ ಪುರುಷಸ್ಯ
ತಸ್ಯ ಲಿಪ್ಸಾರ್ಥ ಲಕ್ಷಣಾ ವಿಭಕ್ತತ್ವಾತ್"

ಎಂದಿದ್ದಾನೆ. ಪ್ರೀತಿಯುಂಟಾಗುವುದೆಂದು ಕೆಲ ಸಮಾಜದವರೆ ಅಲ್ಲಿ ಶಾಸ್ತ್ರವಿಲ್ಲ ಎಂಬುವುದಾಗಿ ಆಗಿನ ಆಚಾರ ವಿಚಾರಗಳನ್ನು ತಿದ್ದಿದ್ದಾನೆ. ತನ್ನ ಶಾಖೆಯನ್ನು ಸಮಾಜದ ಏಳಿಗೆಗೆ ಪ್ರವರ್ತಿಸಿದ್ದಾನೆ.

## ಜೈಮಿನಿ ಸುಬಾಹು ಸಂವಾದ

ಪದ್ಮಪುರಾಣದ ಭೂಮಿ ಖಂಡದಲ್ಲಿ ಜೈಮಿನಿ ಋಷಿಯು ಹಾಗೂ ಸುಬಾಹು ರಾಜರ ಸಂವಾದವು ಉಲ್ಲೇಖಿತವಾಗಿದೆ. ಹಿಂದೆ ಪರಮ ಪರಿಭಕ್ತನೂ, ಧರ್ಮಪರಿಪಾಲಕನಾದ ಸುಬಾಹು ಮಹಾರಾಜನು ತನ್ನಲ್ಲಿ ಬಂದ ಜೈಮಿನಿ ಮಹರ್ಷಿಗೆ ದಾನದ ಬಗ್ಗೆ ಪ್ರಶ್ನೆಗಳನ್ನು ಹಾಕಿದಾಗ ಅವರ ಸಂವಾದ---

ಸುಬಾಹು :-- ಋಷಿವರ್ಯ, ದಾನ ಮಾಡುವುದರಿಂದ ಆಗುವ ಪ್ರಯೋಜನವೇನು?

ಜೈಮಿನಿ :-- ಸ್ವರ್ಗಪ್ರಾಪ್ತಿ.

ಸುಬಾಹು :-- ಸ್ವರ್ಗದಿಂದ ಆಗುವ ಪ್ರಯೋಜನವೇನು?

ಜೈಮಿನಿ :-- ಸ್ವರ್ಗದಲ್ಲಿ ಕ್ರೂರಿಗಳಿಗೆ ಕೃತಘ್ನರಿಗೆ, ನಾಸ್ತಿಕರಿಗೆ ದುರಭಿಮಾನಿಗಳಿಗೆ, ಕಳ್ಳರಿಗೆ ಲೋಭಿಗಳಿಗೆ ಮತ್ತು ನೀಚರಿಗೆ ಸ್ಥಳವಿಲ್ಲ. ಅಲ್ಲಿ ಯಾರಿಗೂ ಹಸಿವು, ದಾಹ, ಶ್ರಮ ಗ್ಲಾನಿ, ಶೀತೋಷ್ಣಗಳು, ವಿಷಾದ, ರೋಗ, ಲೋಭ, ಮೋಹ, ಶೋಕಗಳು ಇಲ್ಲ. ಅಲ್ಲಿ ಆಕಾಶಸಂಚಾರ ಸಕಲ ಸುಖಗಳು ಇವೆ. ಅಲ್ಲಿನ ಕಲ್ಪವೃಕ್ಷಗಳು ಸಕಲ ಇಷ್ಟಾರ್ಥಗಳನ್ನು ನೀಡುತ್ತವೆ. ಅಲ್ಲಿ ವಾಸಿಸುವವರು ಜನರು ದಿವ್ಯತೇಜೋಮಯರಾದವರು. ಸರ್ವಸಂಪತ್ ಸಮೃದ್ಧಿಯಿಂದ ಕೂಡಿದವರು. ಪುಣ್ಯವು ಕ್ಷೀಣಿಸಿದರೆ ಪುನಃ ಭೂಮಿಯಲ್ಲಿ ಜನ್ಮಹೊಂದುತ್ತಾರೆ. ರಾಜನೇ ಆದ್ದರಿಂದ ಸ್ವರ್ಗವೂ ಶಾಶ್ವತವಲ್ಲ ಆದ್ದರಿಂದಲೇ ಸ್ವರ್ಗಾದಿ ಸುಖಕ್ಕಿಂತ ವಿಷ್ಣುಪದವನ್ನು ಹೊಂದಬೇಕಾಗುವ ಆಸೆ ಮುಮುಕ್ಷುಗಳಿಗೆ ಬರುತ್ತೆ. ರಾಜನೇ ದಾನವನ್ನು ಮಾಡದವನನ್ನು ಕ್ಷುತ್ಪಿಪಾಸಾದಿಗಳು ಬಾಧಿಸುತ್ತೆ. ಜ್ಞಾನಿಗಳು ಯಜ್ಞಯಾಗಾದಿಗಳಲ್ಲಿ ದಾನ ಧರ್ಮಗಳನ್ನು ಮಾಡುತ್ತಾರೆ. ಋಷಿಗಳೂ ಕೂಡ ತಾವು ಸಂಗ್ರಹಿಸಿದ ಭಿಕ್ಷಾನ್ನದಲ್ಲಿ ಒಂದು ಭಾಗವನ್ನು ಬ್ರಾಹ್ಮಣರಿಗೆ ನೀಡುತ್ತಾರೆ. ಆದ್ದರಿಂದ ದಾನವನ್ನು ಪ್ರತಿಫಲಾಸೆ ಇಲ್ಲದೆ ನೀಡಬೇಕು. ಜೈಮಿನಿಯ ಪೂರ್ವಮೀಮಾಂಸದ ಒಂಬತ್ತನೆಯ ಅಧ್ಯಾಯದ ನಾಲ್ಕನೆಯ ಅಧಿಕರಣವು ೬ನೇ ಸೂತ್ರವು "ದೇವತಾ ವಾ ಪ್ರಯೋಜಯೇ ದತಿಥಿವದ್ಭೋಜನಸ್ಯ ತದರ್ಥತ್ವಾತ್" ದೇವತಾ ನಿರಾಕರಣ ವಿಷಯಕವಾಗಿದೆ. ೯ನೇ ಸೂತ್ರ "ಅಪಿವಾ ಶಬ್ದಪೂರ್ವತ್ವಾತ್ ಯಜ್ಞಕರ್ಮ ಪ್ರಧಾನಂ ಸ್ಯಾತ್ ಗುಣತ್ವೇ ದೇವತಾ ಶ್ರುತಿಂ" ಈ ಸೂತ್ರಗಳಿಂದ ಯಜ್ಞಕರ್ಮವೇ ಪ್ರಧಾನವೆಂದೂ ದೇವತೆಯು ಗೌಣವೆಂದು ಬ್ರಾಹ್ಮಣನಿಗೆ ಗೋದಾನ ಮಾಡಿದರೂ ಅದರ ಫಲ ಬ್ರಾಹ್ಮಣನಿಂದ ಬರುವುದಿಲ್ಲ ದಾನದಿಂದ ಮಾತ್ರ ಫಲ ಬರುತ್ತೆ ಯಜ್ಞದಿಂದಲೂ ಬರುತ್ತೆ ಎಂಬುವುದಾಗಿ ಜೈಮಿನಿ ತನ್ನ ಪೂರ್ವಮೀಮಾಂಸದಲ್ಲಿ ಪ್ರತಿಪಾದಿಸಿದ್ದಾನೆ. ಜೈಮಿನಿ ಮತವನ್ನು ಸಂಕ್ಷೇಪವಾಗಿ ಹೇಳಬೇಕಾದರೆ ಈಶ್ವರನು ಸರ್ವಜ್ಞನು. ನಿಷ್ಕಲನು, ಸರ್ವಲೋಕಹಿತನು, ಅನಂತಕಲ್ಯಾಣಗುಣ ಪರಿಪೂರ್ಣನು, ಸರ್ವ ದುಃಖಗಳನ್ನು ನಿವಾರಣೆ ಮಾಡುವವನು. ಮೋಕ್ಷಪ್ರದಾಯಕನು ಎಂಬುವುದಾಗಿ ತನ್ನ ದರ್ಶನಗಳಲ್ಲಿ ತನ್ನ ಮತವನ್ನು ಪ್ರತಿಪಾದಿಸಿದ್ದಾನೆ. ವೇದವಚನವೇ ಪ್ರಮಾಣ ಎಂಬುದು ಜೈಮಿನಿಯ ಮತ.

ಜೈಮಿನಿ ಋಷಿಯು ನಾಲ್ಕು ಅಧ್ಯಾಯಗಳ ಜ್ಯೋತಿಷ ಗ್ರಂಥವನ್ನೂ ರಚಿಸಿದ್ದಾನೆ. ಛಾಂದೋಗ್ಯಾನುವಾದ ಎಂಬುವ ತಂತ್ರಗ್ರಂಥವನ್ನು ರಚಿಸಿದ್ದಾನೆ. ಜೈಮಿನೀಯ ಶ್ರೌತಸೂತ್ರವನ್ನು ಜೈಮಿನೀಯ ಗೃಹ್ಯಸೂತ್ರವನ್ನು ಬರೆದಿದ್ದಾನೆ. ಜೈಮಿನಿಯ ಈ ಗ್ರಂಥಗಳೇ ಹಲವಾರು ಧರ್ಮಶಾಸ್ತ್ರಗಳಿಗೆ ಬುನಾದಿ. ಮಾರ್ಗದರ್ಶನವಾಗಿವೆ. 'ಸ್ಮೃತಿ ಮೀಮಾಂಸ' ಎಂಬ ಧರ್ಮಶಾಸ್ತ್ರಕ್ಕೆ ಈತನೇ ಕರ್ತೃ ಎಂಬುವುದಾಗಿ ಹಲವಾರು ಮಹನೀಯರ ಅಭಿಪ್ರಾಯ. ಇಂತಹ ಜೈಮಿನಿ ಮಹರ್ಷಿಗೆ ನಮೋ ನಮಃ. ಇಂತಹ ಜೈಮಿನಿ ಮಹರ್ಷಿಯ ನಾಮಸ್ಮರಣ ಪುಣ್ಯಪ್ರದವು. ಪರಮ ಪದವು. ಸದಾ ಪೂರ್ಣ ಮನೋರಥರಾಗುತ್ತಾರೆ.





# ವಾರ್ತಾ ಲಹರಿ



## ತಿರುಮಲೆಯಲ್ಲಿ ನವರಾತ್ರಿ ಬ್ರಹ್ಮೋತ್ಸವ

ಅಧಿಕಮಾಸದ ವರ್ಷದಲ್ಲಿ ತಿರುಮಲೆಯಲ್ಲಿ ನವರಾತ್ರಿಗಳಲ್ಲಿ ನಡೆಯುವ ಎರಡನೆಯ ಬ್ರಹ್ಮೋತ್ಸವ ಈ ಬಾರಿ ಅಕ್ಟೋಬರ್ 15 ರಿಂದ 25 ರವರೆಗೆ ಯಶಸ್ವಿಯಾಗಿ ನಡೆಯಿತು.

ನವರಾತ್ರಿ ಬ್ರಹ್ಮೋತ್ಸವಗಳ ವೈಶಿಷ್ಟ್ಯವೆಂದರೆ ಸಾಧಾರಣ ಬ್ರಹ್ಮೋತ್ಸವದಲ್ಲಿ ಧ್ವಜಾರೋಪಣ ಅವರೋಹಣಗಳಿದ್ದರೆ ಇಲ್ಲಿ ಧ್ವಜವನ್ನು ಏರಿಸುವುದೇ ಇಲ್ಲ. ಜೊತೆಗೇ ಬ್ರಹ್ಮೋತ್ಸವಗಳಲ್ಲಿ ಐದು ಲಕ್ಷಕ್ಕೂ ಹೆಚ್ಚಿನ ಮಂದಿ ತಿರುಮಲೆ -- ತಿರುಪತಿಗಳ ಮಧ್ಯೆ ಹೋಗಿ ಬರಲು ಬಸ್ ಸೌಲಭ್ಯವನ್ನು ಬಳಸಿಕೊಂಡರು. ಆಂಧ್ರಪ್ರದೇಶದ ಸಾರಿಗೆ ಸಂಸ್ಥೆ 7000 ಟ್ರಿಪ್‌ಗಳಲ್ಲಿ ಯಾತ್ರಿಕರ ಸಾರಿಗೆಯನ್ನು ಸುಗಮಗೊಳಿಸಿತು. ತಿರುಮಲೆಯನ್ನು ಈ ಅವಧಿಯಲ್ಲಿ ಮೂರುವರೆ ಲಕ್ಷ ಮಂದಿ ಸಂದರ್ಶಿಸಿದರೆಂದು ಅಂದಾಜು ಮಾಡಲಾಗಿದೆ. ಸ್ವಾಮಿಯ ಆದಾಯ ಒಂದು ಕೋಟಿ ಎಂಭತ್ತೈದು ಲಕ್ಷ ರೂಗಳು.

ತಿರುಮಲೆಯಲ್ಲಿ ನವರಾತ್ರಿ ಬ್ರಹ್ಮೋತ್ಸವದ ಪ್ರಯುಕ್ತ ವಿಶೇಷವಾದ ಫಲಪುಷ್ಪ ಪ್ರದರ್ಶನವನ್ನೂ ಏರ್ಪಾಡು ಮಾಡಲಾಗಿದ್ದಿತು. ತಿರುಮಲೆಯ ಆಸ್ಥಾನ ಮಂಟಪ ಸಭಾಂಗಣದಲ್ಲಿ ಧರ್ಮಪ್ರಚಾರ ಪರಿಷತ್ ವತಿಯಿಂದ ಪ್ರತಿದಿನವೂ ನಿರಂತರವಾಗಿ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು. ಬೆಳಗ್ಗೆ ವೇದಪಠನ, ಭಗವದ್ಗೀತಾ ಪ್ರವಚನ, ಗಳೊಡನೆ ಆರಂಭವಾದ ಕಾರ್ಯಕ್ರಮಗಳು ರಾತ್ರಿ ಸಂಗೀತ ನೃತ್ಯಕಲಾಪಗಳೊಡನೆ ಮುಗಿಯುತ್ತಿದ್ದವು. ಪುರಾಣ ವಿವರಣೆ, ಹರಿಕಥೆ, ಭರತನಾಟ್ಯ, ಆಳ್ವಾರ್ ಪ್ರಬಂಧ ಮಾಲಾವಿವರ, ಹರಿದಾಸ ಸಾಹಿತ್ಯ ಸಮೀಕ್ಷೆ, ಅನ್ನಮಾಚಾರ್ಯ ಸಂಕೀರ್ತನ ಸೇವೆ ಮುಂತಾದವು ಜನರನ್ನು ಆಕರ್ಷಿಸಿದವು. ಐದತ್ತು ಕ್ಲೋಸ್ಡ್ ಸರ್ಕ್ಯೂಟ್ ಟಿ. ವಿ. ಗಳ ಮೂಲಕ ಇವೆಲ್ಲ ಪ್ರಸಾರವಾದವು. ಶ್ರೀಮತಿ ಎಂ. ಎಸ್. ಸುಬ್ಬುಲಕ್ಷ್ಮಿ, ಶ್ರೀಮತಿ ಮಣಿಕೃಷ್ಣಸ್ವಾಮಿ, ಅವರುಗಳ ಸಂಗೀತ ಸಭೆಗಳು, ಶ್ರೀಮತಿ ಮಂಜುಭಾರ್ಗವಿ ಅವರ ನೃತ್ಯಗೋಷ್ಠಿಗಳು ಹೃದಯಂಗಮವಾಗಿದ್ದುವು.

ಮಂಗಳವಾರ ದಿನಾಂಕ 19--10--93 ರಂದು ಗರುಡಸೇವೆ ಅತ್ಯಂತ ಉತ್ಸಾಹ ಸಂಭ್ರಮಗಳಿಂದ ನಡೆಯಿತು. ಎಪ್ಪತ್ತು ಸಾವಿರಕ್ಕೂ ಹೆಚ್ಚು ಮಂದಿ ಭಕ್ತರು ಗರುಡವಾಹನವನ್ನೇರಿದ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಗೋವಿಂದ ನಾಮ ಘೋಷದೊಡನೆ ಪುರವೀಧಿಗಳಲ್ಲಿ ಸ್ವಾಗತಿಸಿದರು. ರಥ ಬೀದಿಯಲ್ಲಿ ಅಲ್ಲಲ್ಲಿ ಸಾಲುಗಟ್ಟಿ ನಿಂತು ಆರತಿಯನ್ನಿತ್ತು ಆರಾಧಿಸಿದರು. ಜೊತೆಗೇ ದಿವ್ಯಮಂಗಳ ವೇದ ಘೋಷ, ಪ್ರಬಂಧ ಪಾಶುರ ಮಾಲೆಗಳು ಆಕಾಶವನ್ನು ತುಂಬಿದ್ದವು. ರಾತ್ರಿ 9 ಗಂಟೆಗೆ ಆರಂಭವಾದ ಗರುಡವಾಹನ ಮೂರು ಗಂಟೆಗಳ ಕಾಲ ಪುರವೀಧಿಗಳಲ್ಲಿ ಬಿಜ ಮಾಡಿ ಹಿಂದಿರುಗಿತು.

ಅಕ್ಟೋಬರ್ 22 ರಂದು ಶುಕ್ರವಾರ ಬೆಳಗ್ಗೆ ರಜತ ರಥೋತ್ಸವ. ಶ್ರೀದೇವಿ- ಭೂದೇವಿ ಸಹಿತನಾದ ಶ್ರೀ ವೆಂಕಟೇಶ್ವರಸ್ವಾಮಿ ಬೆಳಗ್ಗೆ 5--20 ಕ್ಕೆ ರಜತ ರಥಾರೂಢನಾಗಿ ಪುರವೀಧಿಗಳಲ್ಲಿ ನಯನಾನಂದಕರವಾಗಿ ಹೊರಟ ದೃಶ್ಯವನ್ನು ಜನ ಆನಂದದಿಂದ ವೀಕ್ಷಿಸಿದರು. ರಥ ಬೀದಿವರಿದು ಹೊರಟಾಗ ಭಕ್ತರು ಪರಂಪರೆಯ ಆಚಾರದಂತೆ ಮೆಣಸು, ಕಡಲೆಪಪ್ಪು, ಬಾಳೆಹಣ್ಣು, ಉಪ್ಪು, ನಾಣ್ಯಗಳನ್ನು ಚೆಲ್ಲಿ ಸ್ವಾಮಿಯನ್ನು ಸ್ವಾಗತಿಸಿದರು. ದೇವರು ಮಾಡವೀಧಿಗಳಲ್ಲಿ ತಿರುಗಿ ವರಾಹಸ್ವಾಮಿ ದೇವಾಲಯಕ್ಕೆ ಬರುತ್ತಿದ್ದಂತೆ ಸ್ವಲ್ಪ ಮಳೆಯೂ ಉಂಟಾಯಿತು.

ತಿ.ತಿ.ದೇ. ವಿಶ್ವಸ್ತಮಂಡಳಿಯ ಅಧ್ಯಕ್ಷ ಶ್ರೀ ಎ. ಚೆಂಗಲ್‌ರೆಡ್ಡಿ, ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ವಿ. ಎಲ್. ಎನ್. ಮೂರ್ತಿ, ಜೆ. ಇ. ಓ. ಶ್ರೀ ವೆಂಕಟ್ರಾಮಯ್ಯ, ಸಂರಕ್ಷಣಾಧಿಕಾರಿ ಶ್ರೀ ಜನಾರ್ದನ ನಾಯುಡು, ಮುಖ್ಯ ಎಂಜನಿಯರ್ ಶ್ರೀ ಮೂರ್ತಿ ತಿ.ತಿ.ದೇ. ವಿಶ್ವಸ್ತಮಂಡಳಿಯ ಸದಸ್ಯರು ಶ್ರೀ ನಾಚು ಶೇಷಗಿರಿರಾವ್, ಶ್ರೀ ಜೆ. ಶ್ರೀರಾಮಮೂರ್ತಿ ಮತ್ತಿತರರು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದರು.

ಆಕಾಶವಾಣಿಯ ವತಿಯಿಂದ ಬ್ರಹ್ಮೋತ್ಸವದ ರನ್ನಿಂಗ್ ಕಾಮೆಂಟರಿಯೂ ನಡೆಯಿತು. ಬ್ರಹ್ಮೋತ್ಸವದ ಸಮಯದಲ್ಲಿ ದಿನವೊಂದಕ್ಕೆ 20,000 ಮಂದಿ ಭಕ್ತರು ಉಚಿತ ಭೋಜನ ಸೌಲಭ್ಯದ ಪ್ರಯೋಜನ ಪಡೆದರು. ಈ ಬಾರಿಯ ಬ್ರಹ್ಮೋತ್ಸವದ ಏರ್ಪಾಡುಗಳು ಬಹು ಯಶಸ್ವಿಯಾಗಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ವಿ. ಎಲ್ ಎನ್ ಮೂರ್ತಿ ಅವರ ನೇತೃತ್ವದಲ್ಲಿ ಉಂಟಾಗಿದ್ದವು. ಮೊದಲು ಬಂದವರಿಗೆ ಮೊದಲ ವಸತಿ, ವಾಹನ ಮೆರವಣಿಗೆಗೆ ಮೊದಲಿನಂತೆ ಹೆಚ್ಚಿನ ಪೋಲೀಸು ಮಂದಿಯನ್ನು ಬಳಸದೆ ಆಟೋಮ್ಯಾಟಿಕ್ ಶಸ್ತ್ರಗಳನ್ನು ಹೊಂದಿದ ರಕ್ಷಕರು ಕಾವಲಾಗಿದ್ದರು. ಸ್ಕೌಟ್ಸ್, ಹೋಂಗಾರ್ಡ್ಸ್‌ಗಳನ್ನು ಸ್ವಯಂಸೇವೆಯಲ್ಲಿ ತೊಡಗಿಸಿದ್ದು ಹೆಚ್ಚಿನ ಸ್ನೇಹಪೂರ್ಣ ವಾತಾವರಣ ನಿರ್ಮಾಣವಾಗಿದ್ದಿತು. ಎಲ್ಲ ಕಡೆಯೂ ಆರೋಗ್ಯ ಪರಿಶುಭ್ರತೆಯ ಸಿಬ್ಬಂದಿ ನಿರಂತರವಾಗಿ ಜಾಗೃತಿಯಿಂದ ಕೆಲಸ ನಿರ್ವಹಿಸಿದರು. ತಿ.ತಿ.ದೇ. ವಿದ್ಯುತ್ ವಿಭಾಗ, ಮತ್ತು ಉದ್ಯಾನ ವನ ವಿಭಾಗದವರಿಂದ ವಿದ್ಯುದಲಂಕರಣಗಳು, ಪುಷ್ಪಾಲಂಕರಣಗಳು ತಿರುಮಲೆಯನ್ನು ಭಕ್ತರಿಗೆ ಮತ್ತೂ ಪ್ರಿಯಗೊಳಿಸಿದ್ದವು. ಅಲ್ಲಲ್ಲಿ ಯಾತ್ರಿಕರ ಸಹಾಯಕ್ಕಾಗಿ ವಿಚಾರಣಾಕೇಂದ್ರಗಳು, ವೈದ್ಯಕೀಯ ಕೇಂದ್ರಗಳು ಏರ್ಪಾಡಾಗಿದ್ದವು. ತಿ.ತಿ.ದೇ. ಪ್ರಕಟನ ವಿಭಾಗದ ಪುಸ್ತಕಗಳು ರಿಯಾಯಿತಿದರದಲ್ಲಿ ದೊರೆಯುವಂತೆ ಹಲವಾರು ಕಡೆ ಪುಸ್ತಕ ಪ್ರದರ್ಶನ ಮಾರಾಟ ಕೇಂದ್ರಗಳ ಏರ್ಪಾಡು ಆಗಿದ್ದಿತು. ಇಲ್ಲಿ ಬ್ರಹ್ಮೋತ್ಸವಗಳ ವೀಡಿಯೋ ಕ್ಯಾಸೆಟ್‌ಗಳೂ, ಸಂಗೀತದ ಧ್ವನಿಸುರುಳಿಗಳೂ ಮಾರಾಟವಾದವು.

## ಯಾತ್ರಿಕ -- ಉದ್ಯೋಗಿ ಸೌಹಾರ್ದ -- ಸಂಬಂಧಗಳು

ತಿರುಮಲೆ ತಿರುಪತಿ ದೇವಸ್ಥಾನ ಹಾಗೂ ತಿ.ತಿ.ದೇ. ಉದ್ಯೋಗಿಗಳ ಸಂಘಟನೆಗಳ ಸಂಯುಕ್ತ ಸಂಘಗಳ ಜಂಟಿ ಆಶ್ರಯದಲ್ಲಿ ತಿರುಪತಿಯಲ್ಲಿನ ವಿಶ್ವವಿದ್ಯಾನಿಲಯ ಸಭಾಭವನದಲ್ಲಿ ಅಕ್ಟೋಬರ್ 7, 8, 9 ರಂದು ಯಾತ್ರಿಕ -- ಉದ್ಯೋಗಿಗಳ ಸೌಹಾರ್ದ ಸಂಬಂಧಗಳ ಬಗ್ಗೆ ವಿಚಾರಗೋಷ್ಠಿಯೊಂದು ನಡೆದು ಯಶಸ್ವಿಯಾಯಿತು.

ಸಮಾವೇಶವನ್ನು ಉದ್ಘಾಟಿಸಿದ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯದ ಉಪಕುಲಪತಿ ಪ್ರೊ|| ಜಯರಾಮರೆಡ್ಡಿ ಅವರು ದೇವಾಲಯಗಳು ನಮಗೆ ಪರಂಪರಾದತ್ತ ಆಸ್ತಿಯೆಂದೂ, ಇಲ್ಲಿ ಕೆಲ ಸಮಾಡುವವರೆಲ್ಲ ಸ್ವಾಮಿ ಸೇವಕರೆಂದೂ, ಯಾತ್ರಿಕಭಕ್ತರನ್ನು ಉದ್ಯೋಗಿಗಳು ತಮ್ಮ ಸ್ವಂತ ಬಂಧು ಬಾಂಧವರಂತೆಯೇ ನೋಡಿಕೊಳ್ಳಬೇಕೆಂದೂ ಕರೆ ನೀಡಿದರು.

ತಿ.ತಿ. ದೇವಸ್ಥಾನಗಳ ವಿಶ್ವಸ್ತಮಂಡಳಿಯ ಅಧ್ಯಕ್ಷ ಶ್ರೀ ಆಕೆಪಾಟಿ ಚೆಂಗರ್‌ರೆಡ್ಡಿ ಅವರು ಉದ್ಯೋಗಿಗಳು ದೇವಾಲಯದ ಪಾವಿತ್ರ್ಯವನ್ನು ಕಾಪಾಡಿ, ಯಾತ್ರಿಕರಿಗೆ ಭಕ್ತಿ ಪ್ರಪತ್ತಿಗಳಿಂದ ಸೇವೆ ಸಲ್ಲಿಸಬೇಕೆಂದು ತಿಳಿಸಿದರು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ. ಎಲ್.ಎಸ್. ಮೂರ್ತಿ ಅವರು ಅಧ್ಯಕ್ಷ ಪೀಠದಿಂದ ಮಾತನಾಡುತ್ತ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಭಕ್ತರೇ ಯಜಮಾನರೆಂದೂ ಉದ್ಯೋಗಿಗಳು ಯಜಮಾನರು ಮೆಚ್ಚುವಂತೆ ಕೆಲಸ ಮಾಡುವುದರ ಮೂಲಕವೇ ಸಾರ್ಥಕ್ಯ ಭಾವವನ್ನು ಹೊಂದಲು ಸಾಧ್ಯವೆಂದೂ ನುಡಿದರು.

ತಿ.ತಿ.ದೇ. ಸಂಯುಕ್ತ ಸಂಘಗಳ ಪರವಿಯಿಂದ ಶ್ರೀ ಚೆಂಗಾರೆಡ್ಡಿ, ಶ್ರೀ ಶಿವಕುಮಾರ್ ಅವರುಗಳೂ ಮಾತನಾಡಿದರು. ಸಮಾವೇಶದ ಸಂಚಾಲಕ ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು ಶೆಟ್ಟಿ ಅವರು ಸ್ವಾಗತಿಸಿದರು. ಅತಿಥಿಗಳಿಗೆ ಸಮಾವೇಶ ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀ ಬಲರಾಮರೆಡ್ಡಿ ಅವರು ಜ್ಞಾಪಿಕೆಗಳನ್ನು ನೀಡಿದರು.

ಸಮಾವೇಶದಲ್ಲಿ ಯಾತ್ರಿಕರ ಸೌಲಭ್ಯಕ್ಕೆ ತಿ.ತಿ.ದೇ. ನಡುಗಟ್ಟಿ ನಿಂತಿದೆ ಎಂದು ವಿವರಿಸುತ್ತ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ವೆಂಕಟ್ರಾಮಯ್ಯನವರು ಆಡಳಿತ ಕೈಗೊಂಡಿರುವ ಹಲವಾರು ಯಾತ್ರಿಕೋಪಯೋಗಿ ಕ್ರಮಗಳನ್ನು ವಿವರಿಸಿವರು. ತಿ. ತಿ. ದೇವಸ್ಥಾನಗಳ ಆರ್ಥಿಕ ಸಲಹಾದಾರ ಶ್ರೀ ಗುರುಮೂರ್ತಿ ಅವರೂ ಮಾತನಾಡಿದರು.

ತಿ. ತಿ. ದೇವಸ್ಥಾನಗಳ ಪೂರ್ವ ಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀ ಸಿ. ಅನ್ನಾರಾವ್, ಶ್ರೀ ಕೆ, ಉಮಾಪತಿ, ಶ್ರೀ ಜೆ. ಕುಮಾರಸ್ವಾಮಿರೆಡ್ಡಿ, ಶ್ರೀ ಎಂ. ಚಂದ್ರಮೌಳಿರೆಡ್ಡಿ, ಶ್ರೀ ಎಂ. ವಿ. ಎಸ್. ಪ್ರಸಾದ್, ತಿ.ತಿ.ದೇ. ಮಾಜಿ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಜನಾರ್ದನ ನಾಯುಡು ಮೊದಲಾದವರೂ ಸಮಾವೇಶದಲ್ಲಿ ಭಾಗವಹಿಸಿ ತಮ್ಮ

ತಿ.ತಿ.ದೇ. ಸೇವಾವಕಾಶದ ಅನುಭವಗಳ ಹಿನ್ನೆಲೆಯಲ್ಲಿ ಆಗಬೇಕಾದ ಅಭಿವೃದ್ಧಿ ಯತ್ತ ದೆರಳು ಮಾಡಿ ತೋರಿಸಿದರು. ಮದರಾಸಿನ ಖ್ಯಾತ ಉದ್ಯಮಪತಿ ಶ್ರೀ ಟಿ. ಟಿ. ವಾಸು, ಸಾರ್ವಜನಿಕ ಆಡಳಿತ ಸಂಸ್ಥೆಯ ಪ್ರೊ || ಕೆ. ಕಮಲನಾಥನ್, ತಿ.ತಿ.ದೇ. ಸದಸ್ಯರು ಶ್ರೀ ಶ್ರೀರಾಮ ಮೂರ್ತಿ, ಸಪ್ತಗಿರಿ ಸಂಪಾದಕರು ಶ್ರೀ ಕೆ. ಸುಬ್ಬರಾವ್ ಮುಂತಾದವರು ಮಾತನಾಡಿದರು.

## ತಿ. ತಿ. ದೇ. ಧರ್ಮಕರ್ತರ ಮಂಡಳಿಯ ತೀರ್ಮಾನಗಳು

ಆಂಧ್ರಪ್ರದೇಶ ಸರ್ಕಾರಿ ನೌಕರರಿಗೆ ನೀಡಲಾದ ಹೊಸ ವೇತನ ಶ್ರೇಣಿಯನ್ನು ತಿ. ತಿ.ದೇವಸ್ಥಾನದ ಉದ್ಯೋಗಿಗಳಿಗೆ ನೀಡಬೇಕೆಂದು ತಿ.ತಿ.ದೇ ಧರ್ಮಕರ್ತರ ಮಂಡಳಿ ತೀರ್ಮಾನಿಸಿದೆ.

ತಿರುಮಲೆಯಲ್ಲಿ ಅಕ್ಟೋಬರ್ ತಿಂಗಳ ಕೊನೆಯ ಭಾಗದಲ್ಲಿ ನಡೆದ ಮಂಡಳಿಯ ಸಮಾವೇಶದ ವಿವರಗಳನ್ನು ನೀಡುತ್ತ ತಿ.ತಿ.ದೇ. ಅಧ್ಯಕ್ಷರಾದ ಶ್ರೀ ಎ. ಚೆಂಗಲ್‌ರೆಡ್ಡಿ ಅವರು ತಿಳಿಸಿದರು.

ಯಾತ್ರಿಕರ ಸೌಲಭ್ಯ ಸೌಕರ್ಯಗಳನ್ನು ಹೆಚ್ಚುಪಡಿಸಲು ಮೂವತ್ತು ಮಂದಿ ಯಾತ್ರಿಕ ಸಂಬಂಧಾಧಿಕಾರಿಗಳನ್ನು ನೇಮಕ ಮಾಡಲಾಗುವುದು ಎಂದೂ ಅವರು ತಿಳಿಸಿದ್ದಾರೆ.

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರಿಗೆ ವಜ್ರಕಿರೀಟವನ್ನು ತಿ.ತಿ.ದೇ. ಗಳಲ್ಲಿರುವ ವಜ್ರಗಳಿಂದಲೇ ತಯಾರಿಸುವುದಾಗಿಯೂ ಈ ಕೆಲಸವನ್ನು ತಮಿಳುನಾಡಿನ ಪೂಂಪುಹಾರ್ ಸಂಸ್ಥೆಯವರಿಗೆ ನೀಡಲಾಗುವುದೆಂದೂ, ತಿರುಮಲೆಯ ಚಿನ್ನದ ರಥ ನಿರ್ಮಾಣದ ಮೇಲ್ವಿಚಾರಣೆ ನಡೆಸುತ್ತಿರುವ ಶ್ರೀ ಸೇತುರಾಮನ್ (ತಿ.ತಿ.ದೇ. ಮಾಜಿ ಆರ್ಥಿಕ ಸಲಹೆಗಾರರು) ಅವರೇ ಈ ಬಗ್ಗೆಯೂ ಮೇಲ್ವಿಚಾರಕರಾಗಿರುವರು ಎಂದೂ ತಿಳಿಸಿದರು.

ತಿರುಮಲೆಯಲ್ಲಿ ಯಾತ್ರಿಕಾವಸರ ನೀರಿಗಾಗಿ ಒಂದು ಪ್ರತ್ಯೇಕ ಇಂಜನಿಯರಿಂಗ್ ವಿಭಾಗವನ್ನು ಉಂಟುಮಾಡುವುದಾಗಿಯೂ, ದೆಹಲಿಯ ಶ್ರೀ ವೆಂಕಟೇಶ್ವರ ಆರ್ಟ್ಸ್ ಕಲಾಶಾಲೆಗೆ ಯೂನಿವರ್ಸಿಟಿ ಗ್ರಾಂಟ್ಸ್‌ಕಮಿಷನ್ ಮೂರು ಕೋಟಿ ರೂಗಳನ್ನು ನೀಡಿದೆಯಾಗಿ, ದೆಹಲಿ ಹಾಗೂ ಹೃಷೀಕೇಶಗಳಲ್ಲಿನ ನಿರ್ಮಾಣಗಳಿಗಾಗಿ ಇನ್ನೊಂದು ಇಂಜನಿಯರಿಂಗ್ ವಿಭಾಗವನ್ನು ಏರ್ಪಾಡು ಮಾಡಲೂ ತೀರ್ಮಾನಿಸಲಾಗಿದೆ ಎಂದು ಅವರು ತಿಳಿಸಿದ್ದಾರೆ.

ತಿರುಮಲೆಯಲ್ಲಿ ಸ್ವಾಮಿಕಾಣಿಕೆಯಾಗಿ ಬಂದ ಆಭರಣಗಳನ್ನು ಹರಾಜು ಹಾಕಲು ಸರಕಾರದ ಅನುಮತಿ ಕೋರಲು ತೀರ್ಮಾನಿಸಲಾಗಿದೆ.

ತಿ.ತಿ.ದೇ. ಡೈರಿ ಫಾರಂನಲ್ಲಿ ವಯಸ್ಸಾದ ಗೋವುಗಳನ್ನು ಕರ್ನಾಟಕದ ಒಂದು ಗೋಶಾಲೆಗೆ ನೀಡಿ ಅವುಗಳ ವೆಚ್ಚಗಳಿಗಾಗಿ ಐದು ಲಕ್ಷರೂಗಳನ್ನು ನೀಡಬೇಕೆಂದು ತೀರ್ಮಾನಿಸಲಾಗಿದೆ.

ಬದ್ವೇಲು (ಕಡಪ ಜಿಲ್ಲೆ) ನೂಜಿವೀಡು (ಕೃಷ್ಣಾ ಜಿಲ್ಲೆ) ದ್ವಾರಕಾ ತಿರುಮಲೆ (ಪಶ್ಚಿಮ ಗೋದಾವರಿ ಜಿಲ್ಲೆ) ರಾಜಾನಗರ (ಪೂರ್ವಗೋದಾವರಿ ಜಿಲ್ಲೆ) ಗಳಲ್ಲಿ ತಿ.ತಿ.ದೇ. ಕಲ್ಯಾಣ ಮಂಟಪಗಳ ನಿರ್ಮಾಣಕ್ಕಾಗಿ ತಕ್ಕ ಸ್ಥಳವನ್ನು ನೀಡಲು ಮತ್ತೂ ಮೂರು ತಿಂಗಳ ಅವಕಾಶ ನೀಡಬೇಕೆಂದು ತೀರ್ಮಾನಿಸಲಾಯಿತು.

ತಿರುಮಲೆಯಲ್ಲಿ ಅನ್ನಮಾಚಾರ್ಯ,ತರಿಗೊಂಡ ವೆಂಗಮಾಂಬ ಅವರುಗಳ ಮನೆಗಳನ್ನು ತಿ.ತಿ.ದೇ. ತೆಗೆದುಕೊಂಡು ನಿರ್ವಹಿಸಬೇಕೆಂಬ ಯೋಚನೆಯಿದೆಯೆಂದೂ ಅವರು ನುಡಿದರು.

# ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ. ತಿ. ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ.

ಶಿಲಾವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು. ಇದಕ್ಕಾಗಿ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾದಾಯ ಇಲಾಖಾಧಿಕಾರಿಗಳಿಂದ ಪ್ರಮಾಣಪತ್ರವನ್ನು ಕಳುಹಿಸಬೇಕು.

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ಶಿಲಾ, ಪಂಚಲೋಹ, ವಿಗ್ರಹಗಳನ್ನೂ 50 ಶತಾಂಶ ರಿಯಾಯಿತಿ ದರಗಳಲ್ಲಿ ಒದಗಿಸಲಾಗುವುದು. ಇದಕ್ಕಾಗಿಯೂ ಅರ್ಜಿಗಳನ್ನು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು. ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು. ಹಣದ ಸಂದಾಯವಾದ ನಂತರವೇ ವಿಗ್ರಹಗಳ ತಯಾರಿಕೆಯ ಕೆಲಸವನ್ನು ಕೈಗೆತ್ತಿಕೊಳ್ಳಲಾಗುವುದು.

ತಿರುಪತಿಯಿಂದ ವಿಗ್ರಹಗಳನ್ನು ಪಡೆದು ತಮ್ಮ ಸ್ಥಳಗಳಿಗೆ ಸಾಗಿಸುವ ಹೊಣೆ ಆಯಾ ಅಭ್ಯರ್ಥಿಗಳಿಗೇ ಸೇರಿದ್ದು.

ಕಾಲದಿಂದ ಕಾಲಕ್ಕೆ ತಿ. ತಿ. ದೇ. ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು.

*ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ--*

**ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ--517 501.**

## ಮುಂದಿನ ಸಂಚಿಕೆಯಲ್ಲಿ

### ಸಪ್ತಗಿರಿ --- ಜನವರಿ 1994

**ಭಗವಂತ ಯಾರು**

--ಗೋವಿಂದಾಚಾರ್

**ವಿವೇಕಾನಂದರ ಸಂದೇಶ**

--ಎಸ್. ಕೆ. ಆಚಾರ್

**--ರಾಮಾನುಜರತ್ನ ಮಾಲಿಕಾ**

--ಬಿ. ಎಸ್. ಶೇಷಾದ್ರಿ

**--ಬಸವಣ್ಣನವರ ಭಕ್ತಿಭಾವ**

--ಡಾ|| ಆರ್. ರಾಮಕೃಷ್ಣ

**ದಾಸರೆಂದರೆ ಪುರಂದರದಾಸರಯ್ಯ**

--ಸಂತ ಪರಿಹರಾನಂದ ಸರಸ್ವತೀ.

**ಜೊತೆಗೇ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು**

**ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

ಸೂಚನೆ : ಸಪ್ತಗಿರಿ ವಾರ್ಷಿಕ ಚಂದಾ ಇಪ್ಪತ್ನಾಲ್ಕು ರೂಪಾಯಿ ಮಾತ್ರ. ತಮ್ಮ ಚಂದಾ ಹಣವನ್ನು ಎಂ. ಓ. ಡಿ. ಡಿ. ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ -- ಇವರಿಗೆ ಕಳುಹಿಸಿ. ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ ಎಂದು ವಿನಂತಿ.

## ತಿಂಗಳಿನ ಮುಖ್ಯದಿನಗಳು

### ಜನವರಿ --- 1994

| | |
|---|---|
| 1. ಶನಿವಾರ | ನೂತನ ಸಂವತ್ಸರಾವಿ. |
| 6. ಗುರುವಾರ | ಆಂಡಾಳ್ ನಿರಾಟ್ಟೋತ್ಸವಾರಂಭ. |
| 9. ಭಾನುವಾರ | ತೊಂಡರಡಿಪ್ಪೊಡಿ ಆಳ್ವಾರ್ ವರ್ಷ ತಿರುನಕ್ಷತ್ರ. |
| 12. ಬುಧವಾರ | ಆಂಡಾಳ್ ನೀರಾಟ್ಟೋತ್ಸವ ಸಮಾಪ್ತಿ. |
| 13. ಗುರುವಾರ | ಭೋಗಿ ಹಬ್ಬ. |
| 14. ಶುಕ್ರವಾರ | ಮಕರ ಸಂಕ್ರಮಣ. |
| 15. ಶನಿವಾರ | ಕನೂ ಹಬ್ಬ. |
| | ಶ್ರೀ ಗೋದಾಪರಿಣಯೋತ್ಸವ. |
| | ತಿರುಮಲೆಯಲ್ಲಿ ಪಾರ್ವೇಟಿ ಉತ್ಸವ. |
| 26. ಬುಧವಾರ | ಭಾರತ ಗಣತಂತ್ರದಿನ. |
| 29. ಶನಿವಾರ | ತಿರುಮಳಿಶೈ ಆಳ್ವಾರ್ ವರ್ಷ ತಿರುನಕ್ಷತ್ರ. |



**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ**

**ಕಪಿಲತೀರ್ಥ, ತಿರುಪತಿ.**

ತಿರುಪತಿಯ ಕಪಿಲತೀರ್ಥದಲ್ಲಿರುವ
ಶ್ರೀ ಕಪಿಲೇಶ್ವರಸ್ವಾಮಿ
ದೇವಾಲಯದಲ್ಲಿ ಆಸ್ತಿಕ
ಭಕ್ತ ಪ್ರಯೋಜನಕ್ಕಾಗಿ--

**ನಿತ್ಯಾಭಿಷೇಕ ಸೇವೆ**

--ಏರ್ಪಡಿಸಲಾಗಿದೆ. ವರ್ಷಕ್ಕೆ ೪೨ ರೂಪಾಯಿ ಶುಲ್ಕ ಅಥವಾ ಒಂದೇ ಬಾರಿಗೆ ೫೦೦ ರೂಗಳ ಇಡುಗಂಟು ಹಾಗೂ ೪೨ ರೂಗಳ ಆರಂಭವರ್ಷದ ಶುಲ್ಕವನ್ನು ನೀಡುವುದರ ಮೂಲಕ ಈ ಸೇವೆಯನ್ನು ನಡೆಸಬಹುದಾಗಿದೆ. ವರ್ಷದಲ್ಲಿ ಎರಡು ಬಾರಿ ಇಬ್ಬರು ವಯಸ್ಕರನ್ನು ಈ ಸೇವೆಯ ಸಂದರ್ಶನಕ್ಕೆ ಅನುಮತಿಸಲಾಗುವುದು.

ಭಕ್ತರು ಈ ಸೌಲಭ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

**ತಿ. ತಿ. ದೇ.**

Edited and Published on behalf of T. T. Devasthanams by K. Subba Rao, M. A., and Printed at T.T.D. Press by M. Vijayakumar Reddy, Manager T. T. D. Press, Tirupati-517 501.

